RNI No. KARKAN/2007/22111 ಸಂಪುಟ 12 ಸಂಚಿಕೆ 8 ಮೇ 2018 ₹ 20/-



ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

# الصراط المستقيم
# ಸಿರಾತೇ ಮುಸ್ತಖೀಮ್

ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮುಖವಾಣಿ

ಸತ್ಯಾನ್ವೇಷಿಗಳ ಕೈಪಿಡಿ

# ರಮದಾನ್

ವಿಶೇಷ






الصراط المستقيم

ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

# ಸಿರಾತೇ ಮುಸ್ತಖೀಮ್

ಸತ್ಯವಿಶ್ವಾಸಿಗಳ ಕೈಪಿಡಿ

ಸಂಪುಟ 12 ಸಂಚಿಕೆ 08

رمضان ١٤٣٩ هـ

**ಮೇ 2018**

*ಮಾಲಕರು, ಮುದ್ರಕರು ಮತ್ತು ಪ್ರಕಾಶಕರು:*

**ಮುಹಮ್ಮದ್ ಅಲಿ**

ದಾವಾ ಪಬ್ಲಿಕೇಶನ್ಸ್,
ಹಿರಾ ಕಾಂಪ್ಲೆಕ್ಸ್,
ಡೋರ್ ನಂ. 2-184/11,
2 ನೇ ಬ್ಲಾಕ್, ಕಾಟಿಪಳ್ಳ ಪೋಸ್ಟ್,
ಮಂಗಳೂರು - 575 030

*ಸಂಪಾದಕರು:*

**ಪಿ. ಅಬ್ದುಸ್ಸಲಾಂ ಕಾಟಿಪಳ್ಳ**

Mob: 9986282449
Email: asshahadat@yahoo.co.in

*ಮುಖಪುಟ ವಿನ್ಯಾಸ:*

**ಎ.ಎಸ್ಕೆ.**

*ಮುದ್ರಣ:*

Akshara Printers,
2nd Block, Katipalla,
Mangaluru. D.K.


## ಒಳಪುಟಗಳಲ್ಲಿ

### ಸಂಪಾದಕೀಯ



### ಈ ಸಂಚಿಕೆಯಲ್ಲಿ




Printed, published & owned by Muhammad Ali, Dawa Publications, Hira Complex, 2-184/11, 2nd Block, Katipalla Post, Mangaluru - 575 030. Editor: P. Abdussalam, Printed at: Akshara Printers, 2nd Block, Katipalla Post, Mangaluru. D. K. KARNATAKA

ಸಂಪಾದಕೀಯ

بسم الله الرحمن الرحيم

الحَمْدُ لِلهِ رَبِّ العَالَمِينَ الصَّلَاةُ وَالسَّلَامُ عَلَى أَفْضَلِ الأَنْبِيَاءِ وَالمُرْسَلِينَ
وَعَلَى آلِهِ وَصَحْبِهِ أَجْمَعِينَ أَمَّا بَعْدُ

# ಆಸಿಫಾಳ ಹಸಿಮಾಂಸ ಮತ್ತು ರಣಹದ್ದುಗಳು

ಗುಜ್ಜಾರ್ ಎಂಬ ಹೆಸರಿನ ಹಿನ್ನಲೆಯಲ್ಲಿ ಒಂದು ಸಮುದಾಯದ ದುರಂತ ಕಥೆಯಿದೆ. ಅದು ಪಾಕಿಸ್ಥಾನ ಸೇರಿದಂತೆ ಭಾರತೀಯ ಉಪಭೂಖಂಡ ಹಾಗೂ ಅಫಘಾನಿಸ್ಥಾನದಲ್ಲಿ ಜೀವಿಸುತ್ತಿರುವ ಜನರ ಹಸಿಯಾದ ಜೀವನ ಕಥೆ. ಗುಡ್ಡಗಾಡು, ಮರುಭೂಮಿ ಹಾಗೂ ಸಮುದ್ರ ತೀರಗಳ ಕೃಷಿಯನ್ನು ಮುಖ್ಯ ಉದ್ಯೋಗವನ್ನಾಗಿ ಮಾಡಿಕೊಂಡು ಜೀವಿಸುತ್ತಿರುವ ಗುಜ್ಜಾರ್‌ಗಳ ಜನಸಂಖ್ಯೆಯ ಕುರಿತು ಸರಕಾರದ ಬಳಿ ಒಂದು ಅಂದಾಜು ಲೆಕ್ಕ ಮಾತ್ರವಿದೆ. ಇವರು ಆಯಾ ಪ್ರದೇಶಗಳ ಭಾಷೆಗಳನ್ನು ಮಾತನಾಡುವುದರ ಜೊತೆಗೆ ತಮ್ಮದೇ ಆದ ಡೋಗ್ರಿ ಎಂಬ ಸ್ವಂತ ಭಾಷೆಯೂ ಅವರಿಗಿದೆ. ಒಂಟೆ, ಕುದುರೆ, ಕುರಿಗಳನ್ನು ಸಾಕಿ ಅದರ ಹಾಲು ಮತ್ತು ಚರ್ಮದಿಂದ ಇವರು ಜೀವನ ಸಾಗಿಸುತ್ತಿದ್ದಾರೆ. ಕೆಲವರು ಕರಕುಶಲ ವಸ್ತುಗಳನ್ನು ತಯಾರಿಸುವುದರಲ್ಲಿ ನಿಪುಣರು. ಗುಜರಾತಿನ ಕ್ಷೀರ ಕ್ರಾಂತಿಗೆ ಹೆಸರಾದ ಅಮುಲ್‌ನ ಯಶಸ್ಸಿನ ಹಿಂದೆ ಈ ಸಮುದಾಯದ ಅನೇಕ ಬೆವರ ಹನಿಗಳಿವೆ. ಇವರಲ್ಲಿ ಹೆಚ್ಚಿನವರು ಮುಸ್ಲಿಮರು. ಭಾರತದಲ್ಲಿ ಇವರು ಗುಜರಾತ್, ಜಮ್ಮು ಕಾಶ್ಮೀರ, ಹರ್ಯಾಣ, ರಾಜಸ್ಥಾನ, ಹಿಮಾಚಲ ಪ್ರದೇಶ ಮುಂತಾದ ಕಡೆಗಳಲ್ಲಿ ವಾಸಿಸುತ್ತಿದ್ದಾರೆ. ಮೂರು ತಿಂಗಳ ಮೊದಲು ಜಮ್ಮುವಿನ ಕಥುವಾದಲ್ಲಿರುವ ದೇವಸ್ಥಾನದಲ್ಲಿ ಕೂಡಿ ಹಾಕಿ ಸಾಮೂಹಿಕ ಅತ್ಯಾಚಾರವೆಸಗಿದ ನಂತರ ದಾರುಣ ಹತ್ಯೆಗೀಡಾದ ಆಸಿಫಾ ಎಂಬ ಹೆಣ್ಣುಮಗುವಿನ ಕುಟುಂಬ ಈ ಸಮುದಾಯಕ್ಕೆ ಸೇರಿದೆ.

ಆಸಿಫಾ ಕುಟುಂಬ ಕುರಿಗಾಹಿ ಬಖೇರ್‌ವಾಲ ಅಲೆಮಾರಿ ವಿಭಾಗಕ್ಕೊಳಪಟ್ಟಿದೆ. ಇದು ಗುಜ್ಜಾರ್ ಸಮುದಾಯದ ಹಲವು ಬುಡಕಟ್ಟುಗಳಲ್ಲಿ ಒಂದು. ಬಕರಿ ಅಥವಾ ಆಡು ಎಂಬ ಪದದಿಂದ 'ಬಖೇರ್‌ವಾಲ' ಉತ್ಪತ್ತಿಯಾಗಿದೆ. ಜಮ್ಮು ಕಾಶ್ಮೀರ ಮತ್ತು ಹಿಮಾಚಲ ಪ್ರದೇಶಗಳಲ್ಲಿ ಇವರು ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿದ್ದಾರೆ.

ಶತಮಾನಗಳಿಂದ ಸರಿಯಾದ ಒಂದು ವಾಸಸ್ಥಳವಿಲ್ಲದ ಅಲೆಮಾರಿಗಳಾಗಿ ಬದುಕುತ್ತಿರುವ ಈ ಸಮುದಾಯದ ಹಲವರು ಜಾನುವಾರುಗಳಿಗೆ ಮೇವನ್ನು ಹುಡುಕಿಕೊಂಡು ಹುಲ್ಲು ತುಂಬಿರುವ ಕೃಷಿ ಪ್ರದೇಶಗಳಲ್ಲಿ ವಾಸಿಸುವುದು ರೂಢಿ. ಸ್ವಲ್ಪಕಾಲ ಈ ಪ್ರದೇಶದಲ್ಲಿ ವಾಸಿಸಿದ ಬಳಿಕ ಅವರು ಜಾನುವಾರುಗಳೊಂದಿಗೆ ಬೇರೆಡೆಗೆ ವಲಸೆ ಹೋಗುತ್ತಾರೆ. ಜಮ್ಮುವಿನ ಕಥುವಾದಲ್ಲಿ ಹಲವಾರು ವರ್ಷಗಳಿಂದ ಬದುಕುತ್ತಿರುವ ಅವರಿಗೆ ಅಲ್ಲಿ

ಅವರದ್ದೆಂದು ಹೇಳುವ ಒಂದು ತುಂಡು ಭೂಮಿಯೂ ಇಲ್ಲ.

ಹಿಂದುತ್ವ ರಾಷ್ಟ್ರೀಯವಾದ ಹಾಗೂ ಜನಾಂಗೀಯವಾದ ಜನರ ಮನಸ್ಸಿನಲ್ಲಿ ಕೋಮುವಾದವನ್ನು ತುಂಬಿಸುತ್ತಿರುವ ಕಾಲದಲ್ಲಿ ಈ ಸಮುದಾಯಕ್ಕೆ ಸೇರಿದ ಆಸಿಫಾ ಎಂಬ ಎಂಟರ ಹರೆಯದ ಹುಡುಗಿ ಅತ್ಯಂತ ನೀಚ ರೀತಿಯಲ್ಲಿ ಅತ್ಯಾಚಾರಕ್ಕೊಳಗಾಗಿ ಹತ್ಯೆಗೀಡಾಗುತ್ತಾಳೆ. ಇದು ಹಲವು ಕಾರಣಗಳಿಂದ ಗೋತ್ರ, ಸಮುದಾಯಗಳು ಹಿಂಸಿಸಲ್ಪಡುತ್ತಿರುವ ಕಾಲಘಟ್ಟವಾಗಿದೆ. ಮ್ಯಾನ್ಮಾರ್‌ನ ರಖೈನ್ ಪ್ರಾಂತದ ರೋಹಿಂಗ್ಯಾ ಮುಸ್ಲಿಮರು ಇದಕ್ಕೆ ಉದಾಹರಣೆಯಾಗಿದ್ದಾರೆ. ಈಗ ಗುಜ್ಜಾರ್‌ಗಳು ಕೂಡಾ ಇದಕ್ಕೆ ಸಮಾನವಾದ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾರೆ.

ಇಸ್ಲಾಮೀ ಆಚಾರಾನುಷ್ಠಾನಗಳಲ್ಲಿ ಅಷ್ಟೊಂದು ಸಕ್ರಿಯವಾಗಿ ಪಾಲ್ಗೊಳ್ಳದ ಈ ಸಮುದಾಯ ಜಮ್ಮುವಿನ ಒಂದು ದೊಡ್ಡ ವಿಭಾಗದ ಆಚಾರಗಳನ್ನು ಅನುಸರಿಸುತ್ತಿದೆ. 2016 ರಲ್ಲಿ ಇವರನ್ನು ಕಠುವಾದಿಂದ ಓಡಿಸಲು ಬಿಜೆಪಿಯ ನಾಯಕತ್ವದಲ್ಲಿ ನಡೆದ ಪ್ರಯತ್ನವನ್ನು ಇವರು ವಿಫಲಗೊಳಿಸಿದ್ದರೂ ಅಂದು ಪೊಲೀಸ್ ಗೋಲಿಬಾರಿನಲ್ಲಿ ಯುವಕನೊಬ್ಬ ಮೃತಪಟ್ಟು ಹಲವು ಮಂದಿ ಗಾಯಗೊಂಡಿದ್ದರು. ರಾಷ್ಟ್ರಪತಿ ಆಳ್ವಿಕೆಯ ಪ್ರಭಾವವನ್ನು ಬಳಸಿಕೊಂಡು ಬಿಜೆಪಿ ಈ ಜನಾಂಗ ನಿರ್ಮೂಲನೆಗೆ ಮುಂದಾಗಿತ್ತು. ಇದು ಜಮ್ಮುವಿನಿಂದ 72 ಕಿ.ಮೀ. ದೂರವಿರುವ ಪ್ರದೇಶವಾಗಿದೆ. ಜಮ್ಮುವಿನಲ್ಲಿ ಆರು ತಿಂಗಳಿಗೊಮ್ಮೆ ವಿಧಾನಸಭೆಯ ಕಲಾಪಗಳು ನಡೆಯುತ್ತಿರುವುದಾದರೂ ಅದರಿಂದ ಇಲ್ಲಿಯ ಜನತೆಗೇನೂ ಪ್ರಯೋಜನ ಲಭಿಸಿಲ್ಲ. ಕೇವಲ ಹವಾಮಾನವನ್ನು ಪರಿಗಣಿಸಿ ರಾಜಧಾನಿಯನ್ನು ಬದಲಾಯಿಸಲಾಗುತ್ತದೆ ಅಷ್ಟೆ.

ಆಸಿಫಾಳ ಮೇಲೆ ನಡೆದ ಭೀಭತ್ಸ ಅತ್ಯಾಚಾರದ ಸುದ್ದಿ ಹೊರಬಂದಾಗಲೂ ಜಮ್ಮುವಿನಲ್ಲಿ ಅಂತಹ ಪ್ರತಿಭಟನೆ ವ್ಯಕ್ತವಾಗಲಿಲ್ಲ. ಕಾಶ್ಮೀರದ ಶ್ರೀನಗರದಲ್ಲಿ ಮೊತ್ತಮೊದಲು ಈ ಕೃತ್ಯದ ವಿರುದ್ಧ ಧ್ವನಿ ಮೊಳಗುತ್ತದೆ. ಹತ್ಯೆಯ ಕುರಿತು ರಾಜ್ಯ ಪೊಲೀಸರು ಸಿದ್ಧಪಡಿಸಿದ ಆರೋಪಪಟ್ಟಿ ಬಹಿರಂಗವಾದಾಗ ಆಸಿಫಾಳ ಮೇಲೆ ಮಾನವ ಸಮುದಾಯ ತಲೆತಗ್ಗಿಸುವಂತಹ ಹೇಯ ಕೃತ್ಯ ಎಸಗಲಾಗಿದೆಯೆಂದು ಜಗತ್ತು ತಿಳಿಯುವಂತಾಯಿತು.

ಕಠುವಾದ ಅಮಾನವೀಯ ಕೃತ್ಯದ ಹಿಂದೆ ಜನಾಂಗೀಯ ಶುದ್ಧೀಕರಣದ ಉದ್ದೇಶವಿದೆ. ಕುರಿಗಾಹಿ ಬಖೇರ್‌ವಾಲ ಮುಸ್ಲಿಂ ಅಲೆಮಾರಿ ಸಮುದಾಯವನ್ನು ಜಮ್ಮುವಿಗೆ ಮರಳಿ ಬರದಂತೆ ಹೊರಗಟ್ಟುವ ದ್ವೇಷವಿದೆ. ಈ ಹೀನ ಕೃತ್ಯವನ್ನು ಮುಚ್ಚಿಹಾಕಲು ತ್ರಿವರ್ಣ ಧ್ವಜವನ್ನು ಬಳಸಲಾಯಿತು. ಭಾರತ್ ಮಾತಾ ಕೀ ಜೈ ಎಂದು ಕೂಗಲಾಯಿತು. ಎಂಟು ವರ್ಷದ ಹೆಣ್ಣುಮಗು ಮುಸ್ಲಿಂ ಸಮುದಾಯದಲ್ಲಿ ಹುಟ್ಟಿತು ಎಂಬ ಕಾರಣಕ್ಕಾಗಿ ಅದರ ಮೇಲೆ ಅತ್ಯಾಚಾರವೆಸಗಲಾಯಿತು. ಈ ಅತ್ಯಾಚಾರದಲ್ಲಿ ದೈಹಿಕವಾಗಿ ಭಾಗಿಯಾದವರು ಕೆಲವೇ ಮಂದಿಯಾದರೂ ಮಾನಸಿಕವಾಗಿ ಲಕ್ಷಾಂತರ ಮಂದಿ ಭಾಗಿಯಾದರು. ಅತ್ಯಾಚಾರಿಗಳನ್ನು ರಕ್ಷಿಸಲು ಧರ್ಮ ಮತ್ತು ದೇಶಭಕ್ತಿಯನ್ನು ಬಳಸಲಾಯಿತು. ಈ ಅತ್ಯಾಚಾರದ ಆರೋಪಿಗಳನ್ನು ರಕ್ಷಿಸಲು ಹಿಂದೂ ಏಕತಾ ಮಂಚ್ ಮತ್ತು ಭಾರತ್ ಬಚಾವೋ ಸಂಘಟನೆಗಳು ಬೀದಿಗಿಳಿದವು.

ಎಂಟರ ಹರೆಯದ ಹುಡುಗಿಯನ್ನು ನಾಲ್ಕು ದಿನಗಳ ಕಾಲ ಒಂದು ಮಂದಿರದಲ್ಲಿ ಕೂಡಿಹಾಕಿ ನಿರಂತರ ಅತ್ಯಾಚಾರವೆಸಗಿದ ದುಷ್ಟರು ಕೇವಲ ಕಾಮಾಂಧರಾಗಿರಲಿಲ್ಲ. ಅವರು ಧರ್ಮಾಂಧರೂ ಆಗಿದ್ದರು. ಒಂದು ನಿರ್ದಿಷ್ಟ ಸಮುದಾಯಕ್ಕೆ ಪಾಠ ಕಲಿಸುವುದು ಅವರ ಉದ್ದೇಶವಾಗಿತ್ತು. ಹುಡುಗಿಗೆ ಪುನಃ ಪುನಃ ಮತ್ತು ಬರಿಸುವ ಔಷಧಿ ನೀಡಿ ನಿರಂತರ ಸಾಮೂಹಿಕ ಅತ್ಯಾತಾರವೆಸಗಲಾಗಿತ್ತು. ಈ ಮೃಗೀಯ ಕೃತ್ಯವೆಸಗಿದವರಲ್ಲಿ 60 ದಾಟಿದ ಮುದುಕನೂ ಭಾಗಿಯಾಗಿದ್ದ. ಸಂಜೀರಾಂ ಎಂಬ ಹೆಸರಿನ ಈತ ನಿವೃತ್ತ ಕಂದಾಯ ಅಧಿಕಾರಿಯಾಗಿದ್ದ. ಇವನ ಜೊತಗೆ ಇವನ ಕುಟುಂಬವೂ ಇದರಲ್ಲಿ ಭಾಗಿಯಾಗಿತ್ತು. ಇನ್ನೊಬ್ಬ ಆರೋಪಿ ವಿಶಾಲ್ ಜಂಗೋತ್ರಾನಿಗೆ ಈ ಪ್ರಕರಣದ ಬಾಲಾಪರಾಧಿಯೊಬ್ಬ ಕರೆ ಮಾಡಿ ಮೀರತ್ ನಿಂದ ಬಂದು ಕಾಮ ತೃಷೆಯನ್ನು ತೀರಿಸುವಂತೆ

[redacted]

ಹೇಳಿದ್ದ. ಇವೆಲ್ಲವೂ ನಡೆದಿದ್ದು ಪೊಲೀಸ್ ಅಧಿಕಾರಿಯೊಬ್ಬನ ಮೇಲ್ವಿಚಾರಣೆಯಲ್ಲಾಗಿತ್ತು. ಈತ ಆ ಹುಡುಗಿಯ ಮೇಲೆ ಹಲವು ಬಾರಿ ಅತ್ಯಾಚಾರವೆಸಗಿದ್ದು ಮಾತ್ರವಲ್ಲದೆ ಆಕೆಯನ್ನು ಕೊಲ್ಲುವುದಕ್ಕೆ ಕೆಲವೇ ಕ್ಷಣಗಳ ಮುನ್ನ ಇನ್ನೊಮ್ಮೆ ತನ್ನ ತೃಷೆಯನ್ನು ತೀರಿಸಿಕೊಂಡಿದ್ದ. ನಂತರ ಹುಡುಗಿಯ ಕತ್ತು ಹಿಸುಕಿ ಕೊಲ್ಲಲಾಯಿತು. ಹುಡುಗಿ ಸತ್ತಿದ್ದಾಳೆಂದು ಖಾತರಿಪಡಿಸಲು ಆಕೆಯ ಮೇಲೆ ದೊಡ್ಡ ಕಲ್ಲನ್ನೆತ್ತಿ ಹಾಕಲಾಯಿತು. ನಂತರ ಯಾವುದೇ ಸುಳಿವು ಸಿಗದಿರಲು ಹುಡಗಿಯ ದೇಹ ಮತ್ತು ಬಟ್ಟೆಯನ್ನು ತೊಳೆದುಬಿಡಲಾಯಿತು.

ಹುಡುಗಿಯ ಮೈ ವಿದ್ಯುತ್ ಆಘಾತವುಂಟಾದಂತೆ ಸುಟ್ಟುಹೋಗಿತ್ತು. ದೇಹವನ್ನು ಮುಟ್ಟಿದರೆ ಮೂಳೆಗಳು ತುಂಡಾಗುವಂತೆ ಅನುಭವವಾಗುತ್ತಿದ್ದವು. ಅವರು ಆ ಮೃತದೇಹವನ್ನು ದಫನ ಮಾಡಲು ಅವಕಾಶ ನೀಡಲಿಲ್ಲ. ಬಳಿಕ 7 ಕಿ.ಮೀ. ದೂರದ ಪ್ರದೇಶದಲ್ಲಿ ದಫನ ಮಾಡಬೇಕಾಯಿತು. “ನಮ್ಮ ಮನೆಗಳನ್ನು ನೆಲಸಮ ಮಾಡುವುದಾಗಿ ನಮಗೆ ಬೆದರಿಕೆ ಬರುತ್ತಿದೆ” ಎಂದು ತಾಯಿ ನಿಟ್ಟುಸಿರು ಬಿಡುತ್ತಿದ್ದಾಳೆ.

ಈ ಪ್ರಕರಣದ ತನಿಖೆಯನ್ನು ನಡೆಸಿದ ಪೊಲೀಸ್ ಅಧಿಕಾರಿ ರಮೇಶ್ ಅವರ ಕರ್ತವ್ಯನಿಷ್ಠೆ ಅಪ್ರತಿಮ. ಇವರು ಈ ಹಿಂದೆ ಮುಸ್ಲಿಂ ಭಯೋತ್ಪಾದಕರ ದಾಳಿಗೆ ತುತ್ತಾಗಿ ತಿಂಗಳುಗಟ್ಟಲೆ ಆಸ್ಪತ್ರೆಯಲ್ಲಿ ಕಳೆದಿದ್ದರು ಎನ್ನುವುದು ಗಮನಾರ್ಹ. ಸಂತ್ರಸ್ತೆಯ ಕುಟುಂಬದ ಪರವಾಗಿ ವಾದಿಸುತ್ತಿರುವ ದೀಪಿಕಾ ಸಿಂಗ್ ಎಂಬ ವಕೀಲೆ “ನನ್ನ ಮೇಲೂ ಅತ್ಯಾಚಾರ ನಡೆಯಬಹುದು. ನನ್ನ ಹತ್ಯೆಯೂ ಆಗಬಹುದು” ಎಂದು ನ್ಯಾಯಪೀಠದ ಮುಂದೆ ಗೋಗರೆದಿದ್ದಾರೆ. ಈ ಹಿನ್ನೆಲೆಯಲ್ಲಿ ಸುಪ್ರೀಮ್ ಕೋರ್ಟ್ ರಾಜ್ಯ ಸರಕಾರಕ್ಕೆ ಕಟ್ಟುನಿಟ್ಟಿನ ಸೂಚನೆ ನೀಡಿದೆ. ಪ್ರಕರಣದಲ್ಲಿ ವಾದಿಸಲು ಇಬ್ಬರು ಸರಕಾರಿ ಅಭಿಯೋಜಕರನ್ನು ಸರಕಾರ ನೇಮಿಸಿದ್ದು ಇವರಿಬ್ಬರೂ ಸಿಖ್ ಸಮುದಾಯದವರಾಗಿದ್ದಾರೆ.

ಕಠುವಾ ಮತ್ತು ಉನ್ನಾವ್ ಅತ್ಯಾಚಾರ ಪ್ರಕರಣಗಳ ವಿರುದ್ಧ ದೇಶದ ಆಕ್ರೋಶ ಮುಗಿಲುಮುಟ್ಟಿದೆ. ಎರಡು ಅತ್ಯಾಚಾರಗಳು ಜನರ ಮನಸ್ಸನ್ನು ಕಲಕಿವೆ. ಈ ಅಪರಾಧ ಕ್ರೌರ್ಯದ ಕಾರಣಕ್ಕಷ್ಟೇ ಪ್ರಚಾರಪಡೆದಿಲ್ಲ. ಬದಲಾಗಿ ಆಡಳಿತರೂಢ ಬಿಜೆಪಿ ಸರಕಾರ ಆರೋಪಿಗಳನ್ನು ರಕ್ಷಿಸುತ್ತಿದೆ ಎಂಬ ಕಾರಣಕ್ಕಾಗಿ ಜನರ ತಲ್ಲಣಕ್ಕೆ ಕಾರಣವಾಗಿದೆ. ಸಣ್ಣ ಸಣ್ಣ ವಿಚಾರಗಳ ಬಗ್ಗೆಯೂ ಟ್ವೀಟ್ ಮಾಡುವ ಹವ್ಯಾಸವನ್ನಿಟ್ಟುಕೊಂಡಿರುವ ಪ್ರಧಾನಮಂತ್ರಿಯವರು ಎಂದಿನಂತೆ ಈ ವಿಚಾರದಲ್ಲಿ ದೀರ್ಘ ಮೌನಕ್ಕೆ ಶರಣಾಗಿದ್ದಾರೆ. ಅಲಹಾಬಾದ್ ನ್ಯಾಯಾಲಯ ಕಟಕಿದ ನಂತರ ನೀರು ಮೂಗಿನ ವರೆಗೆ ಬಂದಾಗ ಅವರು ಬಾಯಿ ತೆರೆದಿದ್ದಾರೆ. ‘ಮೌನಮೋಹನಸಿಂಗ್’ ಎಂದು ಹಿಯಾಳಿಸುತ್ತಿದ್ದ ಇವರು ಸ್ವತಃ ‘ಮೌನಮೋದಿಬಾಬಾ’ ಆದದ್ದು ಯಾವಾಗಿನಿಂದ ? ■

## ಮುಖ್ಯ ಪ್ರಕಟಣೆ

ಅಸ್ಸಲಾಮು ಅಲೈಕುಂ ವರಹ್ಮತುಲ್ಲಾಹಿ ವಬರಕಾತುಹು

ಮಾನ್ಯರೇ,

'ಸಿರಾತೆ ಮುಸ್ತಖೀಂ' ಮಾಸಿಕದ ಪ್ರತಿನಿಧಿಯಾಗಿ ದಕ್ಷಿಣ ಕನ್ನಡ, ಉಡುಪಿ, ಕೊಡಗು ಮತ್ತು ಕಾಸರಗೋಡು ಜಿಲ್ಲೆಗೆ ಹಾಫಿಝ್ ಮುಹಮ್ಮದ್ ರಿಯಾಝ್ (ಮೊಬೈಲ್ ಸಂಖ್ಯೆ 84968 97106) ಇವರನ್ನು ಮತ್ತು ಇತರ ಜಿಲ್ಲೆಗಳಿಗೆ ಪ್ರತಿನಿಧಿಯಾಗಿ ಮೌಲಾನ ಮುಈದುರ್‍ರಹ್ಮಾನ್ (ಮೊಬೈಲ್ ಸಂಖ್ಯೆ 86600 10492) ಇವರನ್ನು ನೇಮಿಸಲಾಗಿದೆ.

ಚಂದಾದಾರರು ಮತ್ತು ಪತ್ರಿಕೆಯ ಹಿತೈಷಿಗಳು ಇವರೊಂದಿಗೆ ಸಹಕರಿಸಬೇಕಾಗಿ ವಿನಂತಿ

—ಸಂಪಾದಕರು

# ರಮದಾನ್—ಕೆಲವು ಅಮೂಲ್ಯ ಟಿಪ್ಪಣಿಗಳು

ರಮದಾನ್ ಆಗತವಾದಾಗ ಪ್ರವಾದಿ(ﷺ) ಯವರು ತಮ್ಮ ಅನುಚರರಿಗೆ ಅದರ ಶ್ರೇಷ್ಠತೆಯನ್ನು ಸ್ಪಷ್ಟಪಡಿಸಿ ಕೊಡುತ್ತಿದ್ದರಲ್ಲದೆ, ಒಳಿತುಗಳನ್ನು ಮಾಡಲು ಅವರನ್ನು ಪ್ರೇರೇಪಿಸುವ ಮೂಲಕ ಇಡೀ ರಮದಾನನ್ನು ಸದುಪಯೋಗಪಡಿಸಿಕೊಳ್ಳಬೇಕೆಂದು ನೆನಪಿಸುತ್ತಿದ್ದರು. ರಮದಾನ್ ಪುಣ್ಯಗಳ ಕೊಯ್ಲು ಕಾಲವಾಗಿದೆ. ಇದು ಅನ್ನಪಾನೀಯಗಳನ್ನು ದುರ್ವ್ಯಯ ಮಾಡು ಕಾಲವಲ್ಲ. ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ದುಂದುವೆಚ್ಚ ಮಾಡುವವನು ಶೈತಾನನ ಸಹೋದರನಾಗಿದ್ದಾನೆಂದೂ ಹೇಳಿದ್ದಾನೆ.

ಅನುಗ್ರಹೀತ, ಮಹತ್ವಪೂರ್ಣ ಹಾಗೂ ಸತ್ಕರ್ಮಗಳಿಗೆ ಭಾರೀ ಪ್ರತಿಫಲ ಲಭಿಸುವ ಮಾಸವಾದ ರಮದಾನ್ ಆಗತವಾಗಿದೆ. ಸತ್ಯವಿಶ್ವಾಸಿಗಳಿಗೆ ಪುಣ್ಯವನ್ನು ಶೇಖರಿಸಲು ಅಲ್ಲಾಹನು ಅನುಗ್ರಹಿಸಿದ ಮಾಸ. ಅದು ಪರಿಶುದ್ಧತೆಯನ್ನು ಪಡೆದ ಮನಸ್ಸುಗಳಿಗೆ ಆಹ್ಲಾದ ಮತ್ತು ಸಂತೋಷವನ್ನು ದಯಪಾಲಿಸುವ ಲೋಕ ಪರಿಪಾಲಕನ ದಾನವಾಗಿದೆ.

ಸತ್ಯವಿಶ್ವಾಸಿಗಳಾದ ನಾವು ಪವಿತ್ರ ರಮದಾನನ್ನು ಹೇಗೆ ಸದುಪಯೋಗಪಡಿಸಿಕೊಳ್ಳಬೇಕೆಂದು ತಿಳಿದು ಅದನ್ನು ಆದಷ್ಟು ಕಾರ್ಯಗತಗೊಳಿಸಲು ಪ್ರಯತ್ನಿಸಬೇಕು. ಈ ಲೇಖನದಲ್ಲಿ ಅನಿವಾರ್ಯವಾಗಿ ತಿಳಿದಿರಬೇಕಾದ ಕೆಲವು ಕಾರ್ಯಗಳನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ.

## 1. ಉದ್ದೇಶವು ಉತ್ತಮವಾಗಿರಲಿ:

ಮಹೋನ್ನತನೂ ಪ್ರತಾಪಶಾಲಿಯೂ ಆದ ಅಲ್ಲಾಹನಿಗೆ ಆತ್ಮಾರ್ಥವಾಗಿ ವಿಧೇಯರಾಗಿ ಅವನ ಪ್ರತಿಫಲವನ್ನು ಮಾತ್ರ ಬಯಸಿ ಕರ್ಮಗಳನ್ನೆಸಗಬೇಕು.

ಪ್ರವಾದಿ(ﷺ) ಯವರು ಹೇಳುವುದನ್ನು ನೋಡಿರಿ: ಅಬೂ ಹುರೈರಾ (رضي الله عنه) ಅವರಿಂದ ನಿವೇದನೆ. ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: “ಒಬ್ಬನು ವಿಶ್ವಾಸವಿಟ್ಟು ಪ್ರತಿಫಲಾಪೇಕ್ಷೆಯಿಂದ ಉಪವಾಸ ಅನುಷ್ಠಿಸಿದರೆ ಅವನ ಗತಕಾಲದ ಪಾಪಗಳು ಕ್ಷಮಿಸಲ್ಪಡುವುದು.” (ಬುಖಾರಿ)

## 2. ಬಿದ್‌ಅತ್‌ಗಳನ್ನು ತೊರೆದು ಸುನ್ನತ್‌ಗಳನ್ನು ಅನುಗಮಿಸಿರಿ:

ಆಯಿಶಾ(رضي الله عنها) ರಿಂದ ನಿವೇದನೆ. ಅಲ್ಲಾಹನ ಸಂದೇಶವಾಹಕರು(ﷺ) ಹೇಳಿದರು: “ಧರ್ಮದ ಹೆಸರಲ್ಲಿ ನಾವು ಆದೇಶಿಸಿರದ ಕರ್ಮಗಳನ್ನು ಯಾರಾದರೂ ಮಾಡಿದರೆ ಅದನ್ನು ತಳ್ಳಿಹಾಕಬೇಕು.” (ಮುಸ್ಲಿಂ)

## 3. ಉಪವಾಸ ಆಚರಣೆ:

ಅಬೂ ಹುರೈರಾ(رضي الله عنه) ರಿಂದ ನಿವೇದನೆ. ಅಲ್ಲಾಹನ ಸಂದೇಶವಾಹಕರು(ﷺ) ಹೇಳಿದರು: “ಒಬ್ಬನು ವಿಶ್ವಾಸವಿಟ್ಟು ಪ್ರತಿಫಲಾಪೇಕ್ಷೆಯಿಂದ ರಮದಾನ್‌ನಲ್ಲಿ ವ್ರತಾಚರಿಸಿದರೆ ಅವನ ಗತಕಾಲದ ಪಾಪಗಳು ಕ್ಷಮಿಸಲ್ಪಡುವುದು.” (ಬುಖಾರಿ)

## 4. ರಾತ್ರಿ ನಮಾಝ್:

ಅಬೂ ಹುರೈರಾ(ﷺ) ರಿಂದ ನಿವೇದನೆ. ಅಲ್ಲಾಹನ ಸಂದೇಶವಾಹಕರು(ﷺ) ಹೇಳಿದರು: “ಒಬ್ಬನು ವಿಶ್ವಾಸವಿಟ್ಟು ಪ್ರತಿಫಲಾಪೇಕ್ಷೆಯಿಂದ ರಮದಾನ್‌ನಲ್ಲಿ ಕಿಯಾಮುಲ್ಲೈಲ್ ನಮಾಝ್ ನಿರ್ವಹಿಸಿದರೆ ಅವನ ಗತಕಾಲದ ಪಾಪಗಳು ಕ್ಷಮಿಸಲ್ಪಡುವುದು.” (ಬುಖಾರಿ)

## 5. ಕುರ್‌ಆನ್ ಪಾರಾಯಣ ಮತ್ತು ಅಧ್ಯಯನ:

ಅಲ್ಲಾಹನು ಹೇಳುತ್ತಾನೆ:

﴿ شَهْرُ رَمَضَانَ ٱلَّذِىٓ أُنزِلَ فِيهِ ٱلْقُرْءَانُ هُدًى لِّلنَّاسِ وَبَيِّنَٰتٍ مِّنَ ٱلْهُدَىٰ وَٱلْفُرْقَانِ ﴾

“ಮಾನವರಿಗೆ ಸಾದ್ಯಂತ ಸನ್ಮಾರ್ಗ, ಮಾರ್ಗದರ್ಶಕ ಮತ್ತು ಸತ್ಯಾಸತ್ಯಗಳಲ್ಲಿರುವ ಅಂತರವನ್ನು ಸುವ್ಯಕ್ತವಾಗಿ ತಿಳಿಸುವ ಶಿಕ್ಷಣಗಳನ್ನೊಳಗೊಂಡಿರುವ ಕುರ್‌ಆನ್ ಅವತೀರ್ಣಗೊಂಡಿರುವ ತಿಂಗಳು ರಮದಾನ್ ಆಗಿರುತ್ತದೆ.” (2:185)

ಇಬ್ನ್ ಅಬ್ಬಾಸ್(ﷺ) ರಿಂದ ನಿವೇದನೆ: “...ರಮದಾನ್‌ನ ಎಲ್ಲಾ ರಾತ್ರಿಗಳಲ್ಲಿ (ಜಿಬ್ರೀಲ್) ಪ್ರವಾದಿ(ﷺ) ಯವರಿಗೆ ಕುರ್‌ಆನ್ ಕಲಿಸಿಕೊಡುತ್ತಿದ್ದರು.” (ಬುಖಾರಿ)

ಅಬ್ದುಲ್ಲಾಹಿಬಿನ್ ಅಮ್ರ್(ﷺ) ಹೇಳುತ್ತಾರೆ: “ಉಪವಾಸ ಮತ್ತು ಕುರ್‌ಆನ್ ದಾಸರಿಗಾಗಿ ಶಿಫಾರಸ್ಸು ಮಾಡುವುದು. ಉಪವಾಸ ಹೇಳುತ್ತದೆ: ಓ ನನ್ನ ಪ್ರಭೂ, ಹಗಲಿನಲ್ಲಿ ನಾನು ಅವನನ್ನು ಆಹಾರ ಮತ್ತು ಬಯಕೆಗಳಿಂದ ತಡೆದೆ. ಆದುದರಿಂದ ಅವನಿಗಾಗಿ ನನ್ನ ಶಿಫಾರಸ್ಸನ್ನು ಸ್ವೀಕರಿಸು. ಕುರ್‌ಆನ್ ಹೇಳುತ್ತದೆ: ನಾನು ರಾತ್ರಿಯಲ್ಲಿ ಅವನನ್ನು ನಿದ್ದೆಯಿಂದ ತಡೆದೆ. ಆದುದರಿಂದ ಅವನಿಗಾಗಿ ನನ್ನ ಶಿಫಾರಸ್ಸನ್ನು ಸ್ವೀಕರಿಸು. ಹೀಗೆ ಅವೆರಡೂ ಶಿಫಾರಸ್ಸು ಮಾಡುವುದು.” (ಇಮಾಮ್ ಅಹ್ಮದ್ ಉಲ್ಲೇಖಿಸಿದ ಈ ಹದೀಸ್ ಅಲ್ಬಾನಿಯವರು ಸ್ವಹೀಹ್ ಮಾಡಿದ್ದಾರೆ.)

## 6. ದಾನಧರ್ಮಗಳನ್ನು ವರ್ಧಿಸುವುದು:

ಇಬ್ನ್ ಅಬ್ಬಾಸ್(ﷺ) ರಿಂದ ನಿವೇದನೆ: “ಪ್ರವಾದಿ(ﷺ) ಯವರು ಜನರ ಪೈಕಿ ಅತ್ಯಧಿಕ ದಾನಧರ್ಮಗಳನ್ನು ಮಾಡುತ್ತಿದ್ದ ವ್ಯಕ್ತಿಯಾಗಿದ್ದರು. ರಮದಾನ್‌ನಲ್ಲಿ ಜಿಬ್ರೀಲ್(ﷺ) ರು ಪ್ರವಾದಿ(ﷺ) ಯವರನ್ನು ಭೇಟಿಯಾಗುವಾಗ ಅವರ ದಾನಧರ್ಮಗಳು ಮತ್ತಷ್ಟು ವರ್ಧಿಸುತ್ತಿತ್ತು. ರಮದಾನ್‌ನ ಪ್ರತಿಯೊಂದು ರಾತ್ರಿಯಲ್ಲಿ (ಜಿಬ್ರೀಲರು) ಪ್ರವಾದಿ (ﷺ) ಯವರಿಗೆ ಕುರ್‌ಆನ್ ಕಲಿಸಿಕೊಡುತ್ತಿದ್ದರು. ಆಗ ಅವರು ರಭಸದಲ್ಲಿ ಬೀಸುವ ಬಿರುಗಾಳಿಯಂತೆ ದಾನಧರ್ಮ ಮಾಡುತ್ತಿದ್ದರು.” (ಬುಖಾರಿ)

## 7. ಪಾರಣೆ ಮಾಡಿಸುವುದು:

ಝೈದ್ ಬಿನ್ ಖಾಲಿದ್ ಜುಅನಿ(ﷺ) ರಿಂದ ನಿವೇದನೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: “ಪಾರಣೆ ಮಾಡಿಸುವವನಿಗೆ ಉಪವಾಸ ಆಚರಿಸಿದವನಷ್ಟೇ ಪ್ರತಿಫಲವಿದೆ. ಆದರೆ ಇದರಲ್ಲಿ ಉಪವಾಸಿಗನ ಪ್ರತಿಫಲದಲ್ಲಿ ಯಾವುದೇ ಕೊರತೆ ಉಂಟಾಗುವುದಿಲ್ಲ.” (ತಿರ್ಮುದಿ, ಇಬ್ನ್ ಮಾಜ, ಅಹ್ಮದ್, ಇಬ್ನ್ ಹಿಬ್ಬಾನ್)

## 8. ಕೊನೆಯ ಹತ್ತರಲ್ಲಿ ಹೆಚ್ಚಿನ ಪರಿಶ್ರಮ :

ಆಯಿಶಾ(ﷺ) ಹೇಳುತ್ತಾರೆ: “ಕೊನೆಯ ಹತ್ತು ಪ್ರವೇಶಿಸಿದಾಗ ಪ್ರವಾದಿ(ﷺ) ಯವರು ರಾತ್ರಿಯನ್ನು ಜೀವಂತಗೊಳಿಸುತ್ತಿದ್ದರು ಮತ್ತು ತನ್ನ ಮನೆಯವರನ್ನು ಕೂಗಿ ಎಬ್ಬಿಸಿ ತಮ್ಮ ಉಡುಗೆಗಳನ್ನು ಬಿಗಿಗೊಳಿಸುತ್ತಿದ್ದರು. (ಆರಾಧನೆಗಾಗಿ ಕಠಿಣ ಪರಿಶ್ರಮ ನಡೆಸುತ್ತಿದ್ದರು)” (ಬುಖಾರಿ, ಮುಸ್ಲಿಂ)

## 9. ಲೈಲತುಲ್ ಕದ್ರ್‌ನ ನಿರೀಕ್ಷೆ:

ಉಯಯ್ನ ಬಿನ್ ಅಬ್ದುರ್ರಹ್ಮಾನ್(ﷺ) ತಮ್ಮ ತಂದೆಯವರಿಂದ ನಿವೇದಿಸುತ್ತಾರೆ: “ನಾನು ಅಬೂಬಕ್ಕರ್(ﷺ) ರವರ ಸನ್ನಿಧಿಯಲ್ಲಿ ಲೈಲತುಲ್ ಕದ್ರ್‌ನ ಕುರಿತು ಪ್ರಸ್ತಾಪಿಸಿದೆ. ಆಗ ಅಬೂಬಕ್ಕರ್ (ﷺ) ಹೇಳಿದರು: ನಾನು ಪ್ರವಾದಿ(ﷺ) ಯವರಿಂದ ಅದು ಕೊನೆಯ ಹತ್ತರ ಬೆಸ ರಾತ್ರಿಯಲ್ಲಿರುತ್ತದೆಯೆಂದು ಆಲಿಸಿರುವೆನು. ಹಾಗೆ ನಾನು ಅದನ್ನು ಪ್ರವಾದಿ(ﷺ) ಯವರಿಂದ ಆಲಿಸಿದ ಮೊದಲ್ಗೊಂಡು ಕೊನೆಯ ಹತ್ತರಲ್ಲದೆ (ಬೇರೆ ರಾತ್ರಿಯಲ್ಲಿ) ಹುಡುಕುತ್ತಿರಲಿಲ್ಲ.” (ಅಹ್ಮದ್)

## 10. ಲೈಲತುಲ್ ಕದ್ರ್‌ನಲ್ಲಿ ಖಿಯಾಮುಲ್ಲೈಲ್ ನಿರ್ವಹಿಸಿರಿ:

ಅಬೂ ಹುರೈರಾ(ﷺ) ರಿಂದ ನಿವೇದನೆ. ಅಲ್ಲಾಹನ ಸಂದೇಶವಾಹಕರು(ﷺ) ಹೇಳಿದರು: “ಒಬ್ಬನು ವಿಶ್ವಾಸವಿಟ್ಟು

ಪ್ರತಿಫಲಾಪೇಕ್ಷೆಯಿಂದ ಲೈಲತುಲ್ ಕದ್ರ್‌ನಲ್ಲಿ ಕಿಯಾಮುಲ್ಲೈಲ್ ನಿರ್ವಹಿಸಿದರೆ ಅವನ ಗತಕಾಲದ ಪಾಪಗಳು ಕ್ಷಮಿಸಲ್ಪಡುವುದು.” (ಬುಖಾರಿ)

## 11. ಉಮ್ರ ನಿರ್ವಹಣೆ:

ಇಬ್ನ್ ಅಬ್ಬಾಸ್(ﷺ) ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: “ರಮದಾನ್‌ನ ಒಂದು ಉಮ್ರವು ಹಜ್ಜ್‌ಗೆ ಸಮಾನವಾಗಿದೆ.” (ಬುಖಾರಿ ಮುಸ್ಲಿಂ)

ಮತ್ತೊಂದು ವರದಿಯಲ್ಲಿ “...ಅಲ್ಲಾಹನ ಸಂದೇಶವಾಹಕರೊಂದಿಗೆ ಹಜ್ಜ್ ನಿರ್ವಹಿಸಿದಂತೆ.” ಎಂದಿದೆ.

## 12. ಇಅ್‌ತಿಕಾಫ್:

ಆಯಿಶಾ(ﷺ) ರಿಂದ ನಿವೇದನೆ: “ಪ್ರವಾದಿ(ﷺ) ಯವರು ರಮದಾನ್‌ನ ಕೊನೆಯ ಹತ್ತರಲ್ಲಿ —ಅಲ್ಲಾಹನು ಅವರನ್ನು ಮೃತಪಡಿಸುವ ತನಕ— ಇಅ್‌ತಿಕಾಫ್ ಕೂರುತ್ತಿದ್ದರು.” (ಬುಖಾರಿ ಮುಸ್ಲಿಂ)

## 13. ಅಲ್ಲಾಹನನ್ನು ಧಾರಾಳ ಸ್ಮರಿಸಿರಿ:

ಅಲ್ಲಾಹನು ಹೇಳುತ್ತಾನೆ:




“ಅಲ್ಲಾಹನನ್ನು ಅತ್ಯಧಿಕವಾಗಿ ಸ್ಮರಿಸಿರಿ. ನಿಮಗೆ ಯಶಸ್ಸು ಪ್ರಾಪ್ತವಾಗಲೂಬಹುದು.” (62:10)

ಅಬೂ ಹುರೈರಾ(ﷺ) ಅವರಿಂದ ನಿವೇದನೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: “ಮುಫ್ರಿದ್‌ಗಳು ಮುಂಚೂಣಿಯಲ್ಲಿದ್ದಾರೆ.” ಅವರು ಕೇಳಿದರು: “ಓ ಅಲ್ಲಾಹನ ಸಂದೇಶವಾಹಕರೇ, ಯಾರು ಈ ಮುಫ್ರಿದ್‌ಗಳು?” ಪ್ರವಾದಿ(ﷺ): “ಅವರು ಅಲ್ಲಾಹನನ್ನು ಅತ್ಯಧಿಕವಾಗಿ ಸ್ಮರಿಸುವ ಪುರುಷರು ಮತ್ತು ಸ್ತ್ರೀಯರು.” (ಮುಸ್ಲಿಂ)

## 14. ಅತ್ಯಧಿಕವಾಗಿ ಪ್ರಾರ್ಥಿಸಿರಿ:

ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: “ಪ್ರಾರ್ಥನೆ ಆರಾಧನೆಯಾಗಿದೆ.” (ಅಬೂದಾವೂದ್, ತಿರ್ಮುದಿ—ಹಸನ್ ಆದ ಹದೀಸ್)

ಅಬೂ ಹುರೈರಾ(ﷺ) ಅವರಿಂದ ನಿವೇದನೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: “ಮೂರು ಪ್ರಾರ್ಥನೆಗಳಿಗೆ ಉತ್ತರ ಲಭಿಸುವುದು. ಅದು ಯಾವುದೆಂದರೆ: ಉಪವಾಸಿಗನ ಪ್ರಾರ್ಥನೆ, ಮರ್ದಿಸಲ್ಪಟ್ಟವನ ಪ್ರಾರ್ಥನೆ ಮತ್ತು ಯಾತ್ರಿಕನ ಪ್ರಾರ್ಥನೆ.” (ಬೈಹಕೀ)

## 15. ಸಮಯವಾದ ತಕ್ಷಣ ಪಾರಣೆ:

ಸಹ್ಲ್ ಬಿನ್ ಸಅದ್ ಅಸ್ಸಾಇದೀ(ﷺ) ರಿಂದ ನಿವೇದನೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: “ಸಹ್ರಿ ಉಣ್ಣುವುದನ್ನು ಮುಂದೂಡುವುದು ಹಾಗೂ ಪಾರಣೆ ಮಾಡುವುದರಲ್ಲಿ ತ್ವರೆ ಮಾಡುವ ತನಕ ಜನರು ಒಳಿತಿನಲ್ಲಿರುವರು.” (ಬುಖಾರಿ ಮುಸ್ಲಿಂ)

## 16. ಸಹ್ರಿ ಉಣ್ಣಿರಿ ಮತ್ತು ಅದನ್ನು ಮುಂದೂಡಿರಿ:

ಅಬೂ ಸಈದುಲ್ ಖುದ್ರಿ(ﷺ) ಅವರಿಂದ ನಿವೇದನೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: “ಸಹ್ರಿಯು ಅನುಗ್ರಹವಾಗಿದೆ. ಅದನ್ನು ನೀವು ಬಿಟ್ಟುಬಿಡಬಾರದು. ಕನಿಷ್ಟಪಕ್ಷ ಒಂದು ಗುಟುಕು ನೀರಿನಿಂದಾದರೂ ಸಹ್ರಿ ಮಾಡಿರಿ. ಏಕೆಂದರೆ ಸಹ್ರಿ ಉಣ್ಣುವವರಿಗೆ ಮಹೋನ್ನತನಾದ ಅಲ್ಲಾಹ್ ಮತ್ತು ಅವನ ಮಲಕ್‌ಗಳು ಸ್ವಲಾತ್ ಹೇಳುತ್ತಾರೆ.” (ಅಹ್ಮದ್)

## 17. ಅವಿವೇಕಿಗಳಿಂದ ದೂರವಿರಿ:

ಪ್ರವಾದಿ(ﷺ) ಯವರು ಹೇಳುತ್ತಾರೆ: “ನಿಮ್ಮಲ್ಲಿ ಯಾರಾದರೂ ಉಪವಾಸಿಗರಾಗಿದ್ದರೆ ಅಶ್ಲೀಲ ಮಾತು ಮತ್ತು ಕೆಟ್ಟ ಪ್ರವೃತ್ತಿಗಳಿಂದ ದೂರವಿರಲಿ. ಅವನನ್ನು ಯಾರಾದರೂ ಬೈಯ್ದರೆ ಅಥವಾ ಜಗಳಕ್ಕಿಳಿದರೆ ಅವನು ನಾನು ಉಪವಾಸಿಗನೆಂದು ಹೇಳಲಿ.”

## 18. ಕೆಡುಕುಗಳನ್ನು ವರ್ಜಿಸಿರಿ:

ಪ್ರವಾದಿ(ﷺ) ಯವರು ಹೇಳುತ್ತಾರೆ: “ಸುಳ್ಳು ಮಾತು ಮತ್ತು ಅಂಥಹ ವರ್ತನೆಯನ್ನು ತೊರೆಯದವನು ಅನ್ನಪಾನೀಯಗಳನ್ನು ತೊರೆಯುವ ಯಾವ ಅಗತ್ಯವೂ ಅಲ್ಲಾಹನಿಗಿಲ್ಲ.” (ಬುಖಾರಿ)

## 19. ಒಳಿತನ್ನು ತಿಳಿಸಿಕೊಡಿರಿ:

ಪ್ರವಾದಿ(ﷺ) ಯವರು ಹೇಳುತ್ತಾರೆ: “ಒಬ್ಬನು ಒಂದು ಒಳಿತನ್ನು

ತಿಳಿಸಿಕೊಟ್ಟರೆ ಅವನಿಗೆ ಅದನ್ನು ಕಾರ್ಯರೂಪಕ್ಕಿಳಿಸುವವನ (ಅದಕ್ಕೆ ಸಮಾನವಾದ) ಪ್ರತಿಫಲ ಲಭಿಸುವುದು."

ರಮದಾನ್ ಆಗತವಾದಾಗ ಪ್ರವಾದಿ(ﷺ) ಯವರು ತಮ್ಮ ಅನುಚರರಿಗೆ ಅದರ ಶ್ರೇಷ್ಠತೆಯನ್ನು ಸ್ಪಷ್ಟಪಡಿಸಿ ಕೊಡುತ್ತಿದ್ದರಲ್ಲದೆ, ಒಳಿತುಗಳನ್ನು ಮಾಡಲು ಅವರನ್ನು ಪ್ರೇರೇಪಿಸುವ ಮೂಲಕ ಇಡೀ ರಮದಾನನ್ನು ಸದುಪಯೋಗಪಡಿಸಿಕೊಳ್ಳಬೇಕೆಂದು ನೆನಪಿಸುತ್ತಿದ್ದರು.

ಅಬೂ ಹುರೈರಾ(ﷺ) ಅವರಿಂದ ನಿವೇದನೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: "ನಿಮಗೆ ರಮದಾನ್ ಮಾಸವು ಆಗತವಾಗಿದೆ. ಅದು ಅನುಗ್ರಹೀತವಾದ ತಿಂಗಳು. ಅದರಲ್ಲಿ ಅಲ್ಲಾಹನು ನಿಮಗೆ ಉಪವಾಸವನ್ನು ಕಡ್ಡಾಯಗೊಳಿಸಿದ್ದಾನೆ. ಈ ತಿಂಗಳಲ್ಲಿ ಆಕಾಶದ ಕವಾಟಗಳು ತೆರೆಯಲ್ಪಟ್ಟು, ನರಕದ ಕವಾಟಗಳು ಮುಚ್ಚಲ್ಪಡುವುದು. ಈ ತಿಂಗಳಲ್ಲಿ ಶೈತಾನರು ಬಂಧಿಸಲ್ಪಡುತ್ತಾರೆ. ಅದರಲ್ಲಿ ಅಲ್ಲಾಹನು ಸಾವಿರ ತಿಂಗಳುಗಳಿಗಿಂತಲೂ ಶ್ರೇಷ್ಠವಾದ ಒಂದು ರಾತ್ರಿಯನ್ನು ಅನುಗ್ರಹಿಸಿದ್ದಾನೆ. ಒಬ್ಬನು ಅದರ ಒಳಿತನ್ನು ಸ್ವಯಂ ನಿಷಿದ್ಧ ಮಾಡಿಕೊಂಡರೆ ಅವನಿಗೆ ಅದು ನಿಷಿದ್ಧಗೊಳಿಸಲ್ಪಡುವುದು." (ನಸಾಈ)

## 20. ಐದು ಹೊತ್ತಿನ ನಮಾಝುನ್ನು ಸಾಮೂಹಿಕವಾಗಿ ನಿರ್ವಹಿಸಿರಿ:

ಅಬ್ದುಲ್ಲಾಹಿಬಿನ್ ಉಮರ್(ﷺ) ಅವರಿಂದ ನಿವೇದನೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: "ಜಮಾಅತ್ತಾಗಿ ನಿರ್ವಹಿಸುವ ನಮಾಝಿಗೆ ಒಂಟಿಯಾಗಿ ನಿರ್ವಹಿಸುವ ನಮಾಝಿಗಿಂತ ಇಪ್ಪತ್ತೇಳು ಪಟ್ಟು ಜಾಸ್ತಿ ಪ್ರತಿಫಲವಿದೆ." (ಬುಖಾರಿ)

ಅಬುಲ್ ಅಹ್ವಸಿ(ﷺ) ಅವರಿಂದ ನಿವೇದನೆ. "ಒಬ್ಬನು ನಾಳೆ ಮುಸ್ಲಿಮನಾಗಿ ಅಲ್ಲಾಹನನ್ನು ಭೇಟಿಯಾಗಬೇಕೆಂದು ಬಯಸುವುದಾದರೆ ಅವನು ನಮಾಝಿಗಾಗಿ ಕರೆ ನೀಡುವ ಜಾಗಕ್ಕೆ ತೆರಳಿ ಆ ನಮಾಝ್‌ಗಳನ್ನು ನಿರ್ವಹಿಸಲಿ. ಏಕೆಂದರೆ ಅಲ್ಲಾಹನು ನಿಮ್ಮ ಪ್ರವಾದಿಗೆ ಸನ್ಮಾರ್ಗದ ಚರ್ಯೆಯನ್ನು ನಿಯಮಬದ್ಧಗೊಳಿಸಿದ್ದಾನೆ. ಅದು (ನಮಾಝುನ್ನು ಅದಕ್ಕಾಗಿ ಕರೆಯುವ ಸ್ಥಳದಲ್ಲಿ ನಿರ್ವಹಿಸುವುದು) ಸನ್ಮಾರ್ಗದ ಚರ್ಯೆಯಲ್ಲಿ ಒಳಪಡುತ್ತದೆ. ನಮಾಝುನ್ನು ಮುಂದೂಡಿ ನೀವು ನಿಮ್ಮ ನಮಾಝುನ್ನು ನಿರ್ವಹಿಸುವುದಾದರೆ ಅದು ನೀವು ನಿಮ್ಮ ಪ್ರವಾದಿಯ ಚರ್ಯೆಯನ್ನು ತೊರೆಯುವುದಾಗಿದೆ. ನೀವು ನಿಮ್ಮ ಪ್ರವಾದಿಯ ಚರ್ಯೆಯನ್ನು ತೊರೆದರೆ ಪಥಭ್ರಷ್ಟರಾಗುತ್ತೀರಿ. ಒಬ್ಬನು ಸರಿಯಾದ ರೀತಿಯಲ್ಲಿ ವುದೂ ನಿರ್ವಹಿಸಿ ಇಂತಹ ಮಸೀದಿಗಳಲ್ಲಿ ಯಾವುದಾದರೊಂದು ಮಸೀದಿಗೆ ಹೋಗುವುದಾದರೆ ಅವನ ಪ್ರತಿಯೊಂದು ಹೆಜ್ಜೆಗೂ ಒಂದೊಂದು ಒಳಿತು ದಾಖಲಿಸಲ್ಪಟ್ಟು ಅವನ ಒಂದೊಂದು ಪದವಿ ಉನ್ನತಿಗೇರಿ ಒಂದೊಂದು ಪಾಪಗಳು ಅಳಿಸಲ್ಪಡುವುದು. ಕಪಟವಿಶ್ವಾಸಿಯಲ್ಲದೆ ಬೇರೆ ಯಾರೂ ನಮಾಝಿನಿಂದ ಹಿಂದೆ ನಿಲ್ಲುವುದನ್ನು ನಾವು ನೋಡಲಾರೆವು. ಕೆಲವೊಮ್ಮೆ ಒಬ್ಬರು ಇಬ್ಬರ ಹೆಗಲ ಮೇಲೆ ಕೈಯಿಟ್ಟಾದರೂ ಬಂದು ನಮಾಝಿನ ಸರದಿಯಲ್ಲಿ ನಿಲ್ಲುತ್ತಿದ್ದರು." (ಮುಸ್ಲಿಂ)

## 21. ಸೂರ್ಯೋದಯದ ತನಕ ಮಸೀದಿಯಲ್ಲಿ ಕುಳಿತುಕೊಳ್ಳಿರಿ:

ಅನಸ್(ﷺ) ರಿಂದ ನಿವೇದನೆ: "ಒಬ್ಬನು ಜಮಾಅತ್ತಾಗಿ ಫಜ್ರ್ (ಸುಬುಹಿ) ನಮಾಝ್ ನಿರ್ಹಿಸಿದ ನಂತರ ಸೂರ್ಯೋದಯದ ತನಕ ಅಲ್ಲಾಹನ ಸ್ಮರಣೆಯಲ್ಲಿ ಮಸೀದಿಯಲ್ಲಿ ಕೂತು ಆ ಬಳಿಕ ಎರಡು ರಕ್‌ಅತ್ ನಮಾಝ್ ನಿರ್ವಹಿಸಿದರೆ ಅವನಿಗೆ ಪರಿಪೂರ್ಣವಾದ ಹಜ್ಜ್ ಮತ್ತು ಉಮ್ರಕ್ಕೆ ಸಮಾನವಾದ ಪ್ರತಿಫಲ ಲಭಿಸುತ್ತದೆ." (ತಿರ್ಮುದಿ. ಅಲ್ಬಾನಿ ಸ್ವಹೀಹ್ ಎಂದು ಹೇಳಿದ್ದಾರೆ)

## 22. ಪ್ರವಾದಿ(ﷺ) ಯವರ ಹೆಸರಲ್ಲಿ ಸ್ವಲಾತ್ ವರ್ಧನೆ:

﴿ إِنَّ ٱللَّهَ وَمَلَٰٓئِكَتَهُۥ يُصَلُّونَ عَلَى ٱلنَّبِيِّۚ يَٰٓأَيُّهَا ٱلَّذِينَ ءَامَنُواْ صَلُّواْ عَلَيۡهِ وَسَلِّمُواْ تَسۡلِيمًا ٥٦ ﴾

"ನಿಶ್ಚಯವಾಗಿಯೂ ಅಲ್ಲಾಹ್ ಮತ್ತು ಅವನ ದೂತರು ಪ್ರವಾದಿ (ﷺ) ಯವರಿಗೆ ಸ್ವಲಾತ್ ಹೇಳುತ್ತಾರೆ. ಸತ್ಯವಿಶ್ವಾಸಿಗಳೇ ನೀವೂ ಅವರ ಮೇಲೆ ಸ್ವಲಾತ್ ಮತ್ತು ಸಲಾಮ್ ಹೇಳಿರಿ." (33:56)

ಅಬೂ ಹುರೈರಾ(ﷺ) ಅವರಿಂದ ನಿವೇದನೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: "ಒಬ್ಬನು ನನ್ನ ಹೆಸರಲ್ಲಿ ಒಂದು ಸ್ವಲಾತ್ ಹೇಳಿದರೆ ಅಲ್ಲಾಹನು ಅವನ ಹೆಸರಲ್ಲಿ ಹತ್ತು ಸ್ವಲಾತ್ ದಾಖಲಿಸಿಡುವನು." (ಮುಸ್ಲಿಂ)

## 23. ಜನರಿಗೆ ತೊಂದರೆ ಕೊಡದಿರುವುದು:

ಪ್ರವಾದಿ(ﷺ) ಯವರು ಹೇಳುತ್ತಾರೆ: "ಒಬ್ಬನು ನೈಜ ಮುಸ್ಲಿಮನಾಗಬೇಕಾದರೆ ಇತರ ಮುಸ್ಲಿಮರು ಅವನ ನಾಲಗೆ ಮತ್ತು ಕೈಯಿಂದ

ಸುರಕ್ಷಿತರಾಗಿರಬೇಕು.” (ಮುಸ್ಲಿಂ)

ಅಬೂ ಹುರೈರಾ(ﷺ) ಅವರಿಂದ ನಿವೇದನೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: “ಒಬ್ಬನು ಅಲ್ಲಾಹ್ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುವುದಾದರೆ ಅವನು ತನ್ನ ನೆರೆಹೊರೆಯವರಿಗೆ ಕಿರುಕುಳ ಕೊಡದಿರಲಿ.” (ಮುಸ್ಲಿಂ)

### 24. ಕರುಣೆ ತೋರಿಸುವುದು:

ಅಬ್ದುಲ್ಲಾಹಿಬಿನ್ ಅಮ್ರ್(ﷺ) ಅವರಿಂದ ನಿವೇದನೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: “ಕರುಣೆ ತೋರಿಸುವವನೊಂದಿಗೆ ಪರಮ ಕರುಣಾನಿಧಿ ಕರುಣೆ ತೋರಿಸುತ್ತಾನೆ. ಆದುದರಿಂದ ನೀವು ಭೂಮಿಯ ಮೇಲಿರುವವರೊಂದಿಗೆ ಕರುಣೆ ತೋರಿಸಿರಿ. ಆಗ ಆಕಾಶದಲ್ಲಿರುವವನು ನಿಮ್ಮ ಮೇಲೆ ಕರುಣೆ ತೋರಿಸುತ್ತಾನೆ.” (ತಿರ್ಮುದಿ)

ಅಬೂ ಹುರೈರಾ(ﷺ) ಅವರಿಂದ ನಿವೇದನೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳುತ್ತಾರೆ: “ಒಬ್ಬನು ಒಬ್ಬ ಸತ್ಯವಿಶ್ವಾಸಿಯ ಐಹಿಕ ಕಷ್ಟಗಳಿಗೆ ಸ್ಪಂದಿಸಿದರೆ ಅಲ್ಲಾಹನು ಅಂತ್ಯದಿನದಲ್ಲಿ ಅವನ ಕಷ್ಟಗಳ ಪೈಕಿ ಒಂದು ಕಷ್ಟವನ್ನು ನಿವಾರಿಸುವನು.” (ಮುಸ್ಲಿಂ)

### 25. ನಿಷಿದ್ಧಗಳಲ್ಲಿ ಕಣ್ಣಿನ ದೃಷ್ಟಿಯನ್ನು ಕೆಳಗಡೆ ಇಡುವುದು:

﴿قُل لِّلْمُؤْمِنِينَ يَغُضُّوا مِنْ أَبْصَٰرِهِمْ وَيَحْفَظُوا فُرُوجَهُمْ ذَٰلِكَ أَزْكَىٰ لَهُمْ إِنَّ ٱللَّهَ خَبِيرٌۢ بِمَا يَصْنَعُونَ ﴿٣٠﴾ وَقُل لِّلْمُؤْمِنَٰتِ يَغْضُضْنَ مِنْ أَبْصَٰرِهِنَّ وَيَحْفَظْنَ فُرُوجَهُنَّ﴾

“(ಪ್ರವಾದಿಯವರೇ) ಸತ್ಯವಿಶ್ವಾಸಿಗಳೊಡನೆ ತಮ್ಮ ದೃಷ್ಟಿಗಳನ್ನು ಕೆಳಗಿರಿಸಿಕೊಳ್ಳಲಿಕ್ಕೂ ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿಕ್ಕೂ ಹೇಳಿರಿ. ಇದು ಅವರ ಪಾಲಿಗೆ ಹೆಚ್ಚು ಪರಿಶುದ್ಧವಾದ ಕ್ರಮವಾಗಿದೆ. ಅಲ್ಲಾಹನು ಅವರು ಮಾಡುವುದೆಲ್ಲವನ್ನೂ ಅರಿಯುವವನಾಗಿದ್ದಾನೆ. ಸತ್ಯವಿಶ್ವಾಸಿನಿಯರೊಡನೆ ಹೇಳಿರಿ. ಅವರು ತಮ್ಮ ದೃಷ್ಟಿಗಳನ್ನು ಕೆಳಗಿರಿಸಿಕೊಳ್ಳಲಿ ಮತ್ತು ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿ.” (24:30-31)

### 26. ಮಿತತ್ವ ಪಾಲಿಸಿರಿ:

ರಮದಾನ್ ಪುಣ್ಯಗಳ ಕೊಯ್ಲು ಕಾಲವಾಗಿದೆ. ಇದು ಅನ್ನಪಾನೀಯಗಳನ್ನು ದುರ್ವ್ಯಯ ಮಾಡು ಕಾಲವಲ್ಲ. ಅಲ್ಲಾಹನು ಹೇಳುತ್ತಾನೆ:

﴿وَكُلُوا وَٱشْرَبُوا وَلَا تُسْرِفُوٓا إِنَّهُۥ لَا يُحِبُّ ٱلْمُسْرِفِينَ ﴿٣١﴾﴾

“ನೀವು ತಿನ್ನಿರಿ, ಕುಡಿಯಿರಿ ಮತ್ತು ಮಿತಿಮೀರದಿರಿ. ಅಲ್ಲಾಹನು ಮಿತಿಮೀರುವವರನ್ನು ಮೆಚ್ಚುವುದಿಲ್ಲ.” (7:31)

ಅಲ್ಲಾಹನು ಪವಿತ್ರ ಕುರ್‌ಆನಿನ ಮತ್ತೊಂದೆಡೆ ದುಂದುವೆಚ್ಚ ಮಾಡುವವನು ಶೈತಾನನ ಸಹೋದರನಾಗಿದ್ದಾನೆಂದೂ ಹೇಳಿದ್ದಾನೆ.

### 27. ಪಶ್ಚಾತ್ತಾಪ ಮತ್ತು ಪಾಪವಿಮೋಚನೆಯನ್ನು ವರ್ಧಿಸಿರಿ:

﴿وَتُوبُوٓا إِلَى ٱللَّهِ جَمِيعًا أَيُّهَ ٱلْمُؤْمِنُونَ لَعَلَّكُمْ تُفْلِحُونَ ﴿٣١﴾﴾

“ಓ ಸತ್ಯವಿಶ್ವಾಸಿಗಳೇ, ನೀವೆಲ್ಲರೂ ಸೇರಿ ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡಿರಿ. ನಿಮಗೆ ಯಶಸ್ಸು ಪ್ರಾಪ್ತವಾಗಲೂಬಹುದು.” (24:31)

﴿وَٱسْتَغْفِرُوا ٱللَّهَ إِنَّ ٱللَّهَ غَفُورٌ رَّحِيمٌ ﴿٢٠﴾﴾

“ನೀವು ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡುತ್ತಲಿರಿ. ಖಂಡಿತವಾಗಿಯೂ ಅಲ್ಲಾಹನು ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.” (73:20)

ಪ್ರವಾದಿ(ﷺ) ಯವರು ಹೇಳುತ್ತಾರೆ: “ಓ ಜನರೇ! ನೀವು ಪಶ್ಚಾತ್ತಾಪಪಟ್ಟು ಅಲ್ಲಾಹನೆಡೆಗೆ ಮರಳಿರಿ. ನಾನು ದಿನವೊಂದರಲ್ಲಿ ನೂರು ಬಾರಿ ಪಶ್ಚಾತ್ತಾಪಪಟ್ಟು ಅಲ್ಲಾಹನೆಡೆಗೆ ಮರಳುತ್ತೇನೆ.” (ಮುಸ್ಲಿಂ)

ಇದೀಗ ಆಸನ್ನವಾಗಿರುವ ರಮದಾನ್‌ನಲ್ಲಿ ಪ್ರಮಾಣಬದ್ಧವಾದ ಅತ್ಯಧಿಕ ಪುಣ್ಯಕಾರ್ಯಗಳನ್ನು ಮಾಡಿ ಪಾಪಗಳನ್ನು ಅಳಿಸಿಹಾಕುವ ಮೂಲಕ ಪರಿಶುದ್ಧ ಮನಸ್ಸಿನೊಂದಿಗೆ ರಮದಾನ್‌ಗೆ ವಿದಾಯಕೋರಲು ಅಲ್ಲಾಹನು ಅನುಗ್ರಹಿಸಲಿ. ಆಮೀನ್. ■

# ನಿತ್ಯನೂತನ ದೈವಿಕಗ್ರಂಥ

ನಮಗೆ ಪ್ರಾಣವನ್ನು ದಯಪಾಲಿಸಿದ, ಉಸಿರಾಡಲು ಗಾಳಿ, ಕುಡಿಯಲು ನೀರು ನೀಡಿದ, ಭೂಮಿಯನ್ನು ವಾಸ್ತವ್ಯಕ್ಕೆ ಅನುಕೂಲಕರವಾಗಿ ವ್ಯವಸ್ಥೆಗೊಳಿಸಿದ ಸೃಷ್ಟಿಕರ್ತನು ಅವನ ವತಿಯಿಂದ ಪ್ರಮಾದಗಳಿಂದ ಮುಕ್ತವಾದ ಮಾರ್ಗದರ್ಶನದೊಂದಿಗೆ ಸಂದೇಶವಾಹಕರನ್ನು ನಿಯುಕ್ತಿಗೊಳಿಸಿದ ಅವರ ಮೂಲಕ ಅಲ್ಲಾಹನು ನಮ್ಮ ಜೀವನದ ಉದ್ದೇಶ, ಒಳಿತು-ಕೆಡುಕುಗಳು ಯಾವುದು ಮತ್ತು ಹೇಗೆ ಜೀವಿಸಬೇಕೆಂದು ನಮಗೆ ಕಲಿಸಿಕೊಟ್ಟ.

"ಅವನು ಈ ಸಂದೇಶವಾಹಕರನ್ನೆಲ್ಲಾ ನಿಯೋಗಿಸಿದ ಬಳಿಕ ಜನರ ಬಳಿ ಅಲ್ಲಾಹನಿಗೆದುರು ವಾದವುಳಿಯದಂತಾಗಲು ಅವರನ್ನು ಸುವಾರ್ತೆ ಮತ್ತು ಎಚ್ಚರಿಕೆ ನೀಡುವವರನ್ನಾಗಿ ಮಾಡಿ ಕಳುಹಿಸಿದ್ದನು. ಅಲ್ಲಾಹನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿದ್ದಾನೆ." (4:165)

ಪ್ರವಾದಿ(ﷺ) ಯವರು ದೇವನಿಯುಕ್ತರಾದ ಆ ಪ್ರವಾದಿ ಶ್ರಂಖಲೆಯ ಕೊನೆಯ ಕೊಂಡಿಯಾಗಿದ್ದಾರೆ. ಪವಿತ್ರ ಕುರ್ಆನ್ ಅಂತಿಮ ದೈವಿಕಗ್ರಂಥವಾಗಿದೆ. ದೈವಿಕ ವಚನಗಳಾದ ಕುರ್ಆನ್ ಮತ್ತು ಅದರ ಪ್ರಾಯೋಗಿಕ ವಿವರಣೆಯಾದ ಪ್ರವಾದಿ(ﷺ) ಯವರ ಜೀವನ ಅಥವಾ ಸುನ್ನತ್ ಮಾನವ ಜನಾಂಗದ ಮುಂದೆ ಮೋಕ್ಷದ ಮಾರ್ಗವಾಗಿ ಉಳಿದಿದೆ.

ಪ್ರವಾದಿ(ﷺ) ಯವರು ಹೇಳುತ್ತಾರೆ: "ನನ್ನ ಮತ್ತು ನನ್ನ ಮೊದಲು ಆಗತರಾದ ಪ್ರವಾದಿಗಳ ಉಪಮೆಯು ಹೀಗಿದೆ. ಒಬ್ಬರು ಒಂದು ಕಟ್ಟಡವನ್ನು ನಿರ್ಮಿಸಿದರು. ಅದನ್ನು ಅವರು ಸುಂದರ ಅಚ್ಚುಕಟ್ಟಾಗಿ ಮಾಡಿದರು. ಆದರೆ ಒಂದು ಮೂಲೆಯ ಸ್ಥಾನವನ್ನು ಹಾಗೆಯೇ ಬಿಟ್ಟುಬಿಟ್ಟರು. ಜನರು ಅದರ ಸುತ್ತಮುತ್ತ ತಿರುಗಾಡಿಕೊಂಡು ಕಟ್ಟಡದ ಚೆಲುವನ್ನು ನೋಡಿ ಆಶ್ಚರ್ಯಪಡುತ್ತಿದ್ದರು. ಅವರು ಈ ಮೂಲೆಗೆ ಕಲ್ಲನ್ನಿಡದೆ ಹಾಗೆಯೇ ಏಕೆ ಬಿಟ್ಟುಬಿಡಲಾಗಿದೆಯೆಂದು ಕೇಳುತ್ತಿದ್ದರು. ಆ ಕಲ್ಲು ನಾನೇ ಆಗಿರುತ್ತೇನೆ. ನಾನು ಆ ಪ್ರವಾದಿಯಾಗಿರುತ್ತೇನೆ." (ಬುಖಾರಿ ಮುಸ್ಲಿಂ)

ಆ ಪ್ರವಾದಿ ಮತ್ತು ಆ ದೈವಿಕಗ್ರಂಥ ಯಾವುದಾದರೊಂದು ಪ್ರತ್ಯೇಕ ಜನವಿಭಾಗಕ್ಕೆ ಸೀಮಿತವಾದುದಲ್ಲ.

"ಹೇಳಿರಿ. ಓ ಮಾನವರೇ, ನಾನು ನಿಮ್ಮೆಲ್ಲರ ಕಡೆಗೆ ಭೂಮಿ-ಆಕಾಶಗಳ ಸಾರ್ವಭೌಮನಾಗಿರುವ ಅಲ್ಲಾಹನ ಸಂದೇಶವಾಹಕನಾಗಿರುತ್ತೇನೆ. ಅವನ ಹೊರತು ಅನ್ಯ ಆರಾಧ್ಯನಿಲ್ಲ. ಅವನೇ ಜೀವ ನೀಡುವವನು. ಅವನೇ ಮರಣ ಕೊಡುವವನು. ಆದುದರಿಂದ ಅಲ್ಲಾಹನ ಮೇಲೂ ಹಾಗೂ ಅವನಿಂದ ಕಳುಹಿಸಲಾದ ಅಲ್ಲಾಹ್ ಮತ್ತು ಆದೇಶಗಳ ಮೇಲೆ ನಿರಕ್ಷರಿ ಪ್ರವಾದಿಯ ಮೇಲೂ ವಿಶ್ವಾಸವಿರಿಸಿರಿ ಮತ್ತು ಅವರನ್ನು ಅನುಸರಿಸಿರಿ. ನೀವು ಸನ್ಮಾರ್ಗ ಹೊಂದಬಹುದು." (7:158)

"ನಾವು ನಿಮ್ಮನ್ನು ಸಕಲ ಮಾನವರಿಗೆ ಸುವಾರ್ತೆ ಕೊಡುವವರಾಗಿಯೂ ಎಚ್ಚರಿಕೆ ನೀಡುವವರಾಗಿಯೂ ಮಾಡಿ ಕಳುಹಿಸಿರುತ್ತೇವೆ. ಆದರೆ ಹೆಚ್ಚಿನವರು ಅರಿಯುವುದಿಲ್ಲ." (34:28)

"ಈ ಫುರ್ಕಾನನ್ನು ಸಮಸ್ತ ಜಗತ್ತಿನವರಿಗೆ ಎಚ್ಚರಿಕೆಯಾಗಲಿಕ್ಕಾಗಿ ತನ್ನ ದಾಸನ ಮೇಲೆ ಅವತೀರ್ಣಗೊಳಿಸಿದವನು ಪರಮ ಸುಮಂಗಳನು." (25:1)

## ಕುರ್‌ಆನ್ ದೈವಿಕವೇ?

ಇತರ ಪ್ರವಾದಿಗಳಿಗೆ ನೀಡಲ್ಪಟ್ಟ ದೈವಿಕಗ್ರಂಥಗಳು ಒಂದೊಂದು ಕಾಲಘಟ್ಟ ಹಾಗೂ ಪ್ರತ್ಯೇಕ ಸಮುದಾಯಗಳಿಗೆ ಮಾತ್ರ ಸೀಮಿತವಾಗಿ ಇಳಿಸಲ್ಪಟ್ಟಿತ್ತು. ಆ ಕಾಲಘಟ್ಟಗಳ ನಂತರ ಅವುಗಳ ದೌತ್ಯವು ಕೊನೆಗೊಂಡಿತು. ನಂತರದ ಜನರು ಆ ದೈವಿಕ ಗ್ರಂಥಗಳಲ್ಲಿ ಅವರ ಹಿತಕ್ಕನುಸಾರ ಹಲವು ಕಾರ್ಯಗಳನ್ನು ಸೇರಿಸಿ ಇನ್ನು ಕೆಲವನ್ನು ಬಿಟ್ಟುಬಿಟ್ಟರು. ಆದರೆ ಪವಿತ್ರ ಕುರ್‌ಆನ್ ಲೋಕಾವಸಾನದ ತನಕವಿರುವ ಜನರಿಗೆ ಮಾರ್ಗದರ್ಶಕವಾಗಿ ಸೃಷ್ಟಿಕರ್ತನು ಅವತೀರ್ಣಗೊಳಿಸಿದ ಗ್ರಂಥವೆಂಬ ನೆಲೆಯಲ್ಲಿ ಅದರ ಸಂರಕ್ಷಣೆಯ ಹೊಣೆಯನ್ನೂ ಅವನೇ ಹೊತ್ತುಕೊಂಡಿದ್ದಾನೆ.

“ಈ ಉಪದೇಶವನ್ನು ನಿಶ್ಚಯವಾಗಿಯೂ ನಾವು ಅವತೀರ್ಣಗೊಳಿಸಿದ್ದೇವೆ. ಮತ್ತು ಸ್ವತಃ ನಾವೇ ಅದರ ರಕ್ಷಕರೂ ಆಗಿರುತ್ತೇವೆ.” (15:9)

ಪವಿತ್ರ ಕುರ್‌ಆನ್ ಇಂದಿಗೂ ಪೂರ್ವಿಕ ದೈವಿಕಗ್ರಂಥಗಳನ್ನು ಸಮರ್ಥಿಸಿ, ಅವುಗಳ ಮೂಲಭೂತ ಆಶಯಗಳನ್ನು ಸಂರಕ್ಷಿಸುತ್ತಾ ನೆಲೆಗೊಂಡಿದೆ.

“(ಪ್ರವಾದಿಯವರೇ) ನಾವು ಈ ಗ್ರಂಥವನ್ನು ನಿಮಗೆ ಕಳುಹಿಸಿರುವೆವು. ಇದು ಸತ್ಯದೊಂದಿಗೆ ಬಂದಿದೆ ಮತ್ತು ಅಲ್ ಕಿತಾಬ್‌ನ ಪೈಕಿ ತನ್ನ ಮುಂದಿರುವುದನ್ನೆಲ್ಲ ದೃಢಪಡಿಸುವಂತಹದೂ, ಅದರ ಸಂರಕ್ಷಕೂ ಆಗಿದೆ.” (5:48)

ಪವಿತ್ರ ಕುರ್‌ಆನಿನ ದೈವಿಕತೆಯಲ್ಲಿ ಸಂಶಯವಿಡುವವರಿಗೆ ಅದು ಪ್ರಾಮಾಣಿಕವಾದ ಅನ್ವೇಷಣಾ ಹಾಗೂ ಪರಿಶೋಧನೆಗೆ ಸಿದ್ಧರಾಗಿ, ಅದರ ನಿಷ್ಪಕ್ಷಪಾತತೆ ಮತ್ತು ಸತ್ಯಸಂಧತೆಯನ್ನು ಅಧ್ಯಯನಕ್ಕೊಳಪಡಿಸಬೇಕೆಂದು ಕರೆ ನೀಡುತ್ತದೆ.

1. ದೈವಿಕವೆಂದು ಸ್ವಯಂ ವಾದಿಸುವ ಏಕಮಾತ್ರ ಗ್ರಂಥ.

ಲೋಕದಲ್ಲಿ ಹಲವಾರು ಗ್ರಂಥಗಳಿವೆ. ಅವುಗಳಲ್ಲಿ ಯಾವುದೂ ದೈವಿಕಗ್ರಂಥವೆಂದು ಸ್ವಯಂ ವಾದಿಸುವುದಿಲ್ಲ. ಆದರೆ ಕುರ್‌ಆನ್ ಲೋಕದ ಸೃಷ್ಟಿಕರ್ತನಾದ ಅಲ್ಲಾಹನಿಂದ ಅವತೀರ್ಣಗೊಂಡಿದೆಯೆಂದು ಪುನರಾವರ್ತಿಸಿ ಹೇಳುತ್ತದೆ.

“ಅಲಿಫ್-ಲಾಂ-ರಾ. ಇವು ಸುವ್ಯಕ್ತ ಗ್ರಂಥದ ಸೂಕ್ತಿಗಳಾಗಿವೆ. ಇದನ್ನು ಚೆನ್ನಾಗಿ ತಿಳಿದುಕೊಳ್ಳಲು ಸಾಧ್ಯವಾಗುವಂತೆ ಇದನ್ನು ಕುರ್‌ಆನನ್ನಾಗಿ ಮಾಡಿ ಅರಬಿ ಭಾಷೆಯಲ್ಲಿ ಅವತೀರ್ಣಗೊಳಿಸಿದ್ದೇವೆ.” (12:1-2)

“ಅಲಿಫ್-ಲಾಂ-ರಾ. ಇದೊಂದು ಗ್ರಂಥ. ನೀವು ಜನರನ್ನು ಅವರ ಪ್ರಭುವಿನ ಅನುಜ್ಞೆಯಂತೆ ಅಂಧಕಾರಗಳಿಂದ ಹೊರತೆಗೆದು ಪ್ರಕಾಶದ ಕಡೆಗೆ ತರಲಿಕ್ಕಾಗಿ ನಾವು ಇದನ್ನು ನಿಮಗೆ ಅವತೀರ್ಣಗೊಳಿಸಿದ್ದೇವೆ. ಅವನು ಮಹಾ ಪ್ರತಾಪಿಯೂ ಸ್ವಯಂ ಸ್ತುತ್ಯರ್ಹನೂ ಆಗಿರುತ್ತಾನೆ.” (14:1)

2. ಕುರ್‌ಆನಿನ ದೈವಿಕತೆಯಲ್ಲಿ ಸಂಶಯಿಸುವವರಿಗೆ ಅದು ಪ್ರಬಲವಾದ ಪಂಥಾಹ್ವಾನವನ್ನೊಡ್ಡುತ್ತದೆ.

ಅನಕ್ಷರಸ್ಥರಾದ ಪ್ರವಾದಿ(ﷺ) ಯವರು ಕುರ್‌ಆನಿನ ದೈವಿಕತೆಯನ್ನು ನಿಷೇಧಿಸಿದ ದೊಡ್ಡ ಸಾಹಿತಿಗಳನ್ನೊಳಗೊಂಡು ಶತ್ರುವಿಭಾಗದೊಂದಿಗೆ ನೀವೆಲ್ಲರೂ ಒಟ್ಟು ಸೇರಿ ಇದರಂತಿರುವ ಒಂದು ಗ್ರಂಥವನ್ನು ರಚಿಸಿ ತನ್ನಿರೆಂಬ ಸವಾಲನ್ನೊಡ್ಡುತ್ತದೆ.

“(ಪ್ರವಾದಿಯವರೇ) ಹೇಳಿರಿ. ಮನುಷ್ಯರೂ ಜಿನ್ನ್‌ಗಳೂ ಒಟ್ಟಾಗಿ ಈ ಕುರ್‌ಆನಿನಂತಹ ಒಂದು ವಸ್ತುವನ್ನು ತರಲು ಪ್ರಯತ್ನಿಸಿದರೆ ಅವರೆಲ್ಲರೂ ಪರಸ್ಪರ ಸಹಾಯಕರಾದರೂ ಅವರಿಗೆ ಅದನ್ನು ತರಲಿಕ್ಕಾಗದು.” (17:88)

ಇದು ಸಾಧ್ಯವಾಗದಿದ್ದರೆ ಇದರಂತಿರುವ ಹತ್ತು ಅಧ್ಯಾಯಗಳನ್ನಾದರೂ ರಚಿಸಿ ತನ್ನಿರೆಂದು ಪಂಥಾಹ್ವಾನವನ್ನು ಪರಿಷ್ಕರಿಸಲಾಗುತ್ತದೆ.

“ಈ ಗ್ರಂಥವನ್ನು ತಾವೇ (ಪ್ರವಾದಿ) ರಚಿಸಿದ್ದೆಂದು ಇವರು ಹೇಳುತ್ತಿದ್ದಾರೆಯೇ? ಹಾಗಾದರೆ ಇದರಂತಹ ಹತ್ತು ಅಧ್ಯಾಯಗಳನ್ನು ಸೃಷ್ಟಿಸಿ ತನ್ನಿರಿ ಮತ್ತು ಅಲ್ಲಾಹನ ಹೊರತು ನಿಮ್ಮ (ಪೂಜ್ಯರು) ಯಾರೆಲ್ಲ ಇರುವರೋ ಅವರನ್ನೆಲ್ಲ ಸಹಾಯಕ್ಕಾಗಿ ಕರೆಯಲು ಸಾಧ್ಯವಿದ್ದರೆ ಕರೆದುಕೊಳ್ಳಬಹುದು. ನೀವು ಸತ್ಯವಾದಿಗಳಾಗಿದ್ದರೆ ಹಾಗೆ ಮಾಡಿರಿ.” (11:13)

ಇದು ಕೂಡಾ ನಿಮಗೆ ಅಸಾಧ್ಯವಾದರೆ ಕನಿಷ್ಟಪಕ್ಷ ಒಂದು ಅಧ್ಯಾಯವನ್ನಾದರೂ ರಚಿಸಿ ತನ್ನಿರೆಂದು ಕುರ್‌ಆನ್ ತನ್ನ ಪಂಥಾಹ್ವಾನವನ್ನು ಮತ್ತುಷ್ಟು ಸರಳೀಕರಿಸುತ್ತದೆ.

“ನಾವು ನಮ್ಮ ದಾಸನಿಗೆ ಅವತೀರ್ಣಗೊಳಿಸಿದ ಈ ಗ್ರಂಥವು ನಮ್ಮದೋ ಅಲ್ಲವೋ ಎಂಬ ವಿಷಯದಲ್ಲಿ ನಿಮಗೆ ಸಂದೇಹವಿದ್ದರೆ ಇದಕ್ಕೆ ಸರಿಸಮಾನವಾದ ಒಂದು ಅಧ್ಯಾಯವನ್ನಾದರೂ ರಚಿಸಿ ತನ್ನಿರಿ. ಅಲ್ಲಾಹನ ಹೊರತು ನಿಮ್ಮೆಲ್ಲ ಸಾಕ್ಷಿಗಳನ್ನೂ ನಿಮ್ಮ ಸಹಾಯಕ್ಕಾಗಿ ಕರೆದು ತನ್ನಿರಿ. ನೀವು ಸತ್ಯವಾದಿಗಳಾಗಿದ್ದರೆ ಈ

ಕಾರ್ಯವನ್ನು ಮಾಡಿ ತೋರಿಸಿರಿ.” (2:23)

ಹದಿನಾಲ್ಕು ಶತಮಾನಗಳಿಂದ ಶತ್ರುಗಳ ಕರ್ಣಪಟಲದಲ್ಲಿ ಮಾರ್ದನಿಸುತ್ತಿರುವ ಈ ಸವಾಲನ್ನು ಸ್ವೀಕರಿಸಲು ಕುರ್‌ಆನಿನ ವಿರೋಧಿಗಳಿಗೆ ಸಾಧ್ಯವಾಗದಿರುವುದು ಅದರ ದೈವಿಕತೆಯನ್ನು ಜಗಜ್ಜಾಹೀರುಪಡಿಸುವ ಪರಮ ಸತ್ಯವಾಗಿದೆ.

3. ಶತಶತಮಾನಗಳನ್ನು ಹಿಂದಿಕ್ಕಿದ ಗ್ರಂಥ.

ಪವಿತ್ರ ಕುರ್‌ಆನಿನ ಸೂಕ್ತಿಗಳು ಕಾಲಚಕ್ರದ ಉರುಳುವಿಕೆಯಲ್ಲಿ ಕಾಲಹರಣಗೊಳ್ಳದೆ ಸಮೃದ್ಧ ಸಾಹಿತ್ಯ ಹಾಗೂ ವಿಪುಲ ಆಶಯದಿಂದ ನಿತ್ಯನೂತನವಾಗಿ ನೆಲೆಗೊಂಡಿದೆ. ಅದನ್ನು ದಿನನಿತ್ಯ ಪುನರಾವರ್ತಿಸಿ ಆಲಿಸಿದರೂ ಪುನರಾವರ್ತಿಸಿ ಪಾರಾಯಣ ಮಾಡಿದರೂ ಸತ್ಯವಿಶ್ವಾಸಿಗಳಿಗೆ ಅದರೊಂದಿಗೆ ಯಾವುದೇ ರೀತಿಯ ಆಲಸ್ಯ ಅಥವಾ ನಿರುತ್ಸಾಹ ಉಂಟಾಗದಿರುವುದು ಗಮನಾರ್ಹವಾಗಿದೆ. ಹದಿನಾಲ್ಕು ಶತಮಾನಗಳು ಕಳೆದರೂ ಅದರ ಯಾವುದಾದರೊಂದು ವಿವರಣೆ ಕೂಡಾ ಅಸಂಬದ್ಧವಾಗಿದೆಯೆಂದು ವಸ್ತುನಿಷ್ಠವಾಗಿ ನಿರೂಪಿಸಲು ವೈರಿಗಳಿಗೆ ಸಾಧ್ಯವಾಗಿಲ್ಲ.

ಕುರ್‌ಆನ್ ನಂಬಿಗಸ್ತರಾದ ಜಿಬ್ರೀಲ್ ಎಂಬ ಮಲಕ್ ಮುಖಾಂತರ ಅಲ್ಲಾಹನಿಂದ ಲಭಿಸಿದ ಗ್ರಂಥ ಎಂಬ ಅದರ ವಾದಕ್ಕೆ ಮೇಲೆ ವಿವರಿಸಿದ ಕಾರ್ಯಗಳೆಲ್ಲವೂ ಪುಷ್ಠಿ ನೀಡುತ್ತದೆ.

“ಇದು ಸರ್ವಲೋಕಗಳ ಪ್ರಭುವಿನಿಂದ ಅವತೀರ್ಣಗೊಂಡಿದೆ. ನೀವು ಎಚ್ಚರಿಕೆ ನೀಡುವವರಲ್ಲಿ ಸೇರಲಿಕ್ಕಾಗಿ, ಪ್ರಾಮಾಣಿಕ ಆತ್ಮವು ಇದರ ಜೊತೆ ನಿಮ್ಮ ಹೃದಯಕ್ಕೆ ಇಳಿದಿದೆ. ಇದು ಸುಸ್ಪಷ್ಟವಾದ ಅರಬಿ ಭಾಷೆಯಲ್ಲಿದೆ.” (26:192-195)

4. ಪ್ರಮಾದಗಳಿಂದ ಮುಕ್ತವಾದ ಮಾರ್ಗದರ್ಶನ.

ಪವಿತ್ರ ಕುರ್‌ಆನ್ ಆಧ್ಯಾತ್ಮಿಕ, ಭೌತಿಕ, ಸಾಂಸ್ಕೃತಿಕ ಹಾಗೂ ಸ್ವಭಾವಕ್ಕೆ ಸಂಬಂಧಿಸಿದ ಪ್ರತಿಯೊಂದು ಕ್ಷೇತ್ರದಲ್ಲಿ ಕುಂದುಕೊರತೆಗಳಿಂದ ಮುಕ್ತವಾದ ಮಾರ್ಗದರ್ಶನವನ್ನು ನೀಡುತ್ತದೆ. ಕುಟುಂಬ, ಸಮಾಜ, ರಾಜಕೀಯ, ಆರ್ಥಿಕರಂಗಗಳಲ್ಲಿ ಪಾಲಿಸಬೇಕಾದ ನೈತಿಕತೆಯನ್ನು ಕುರ್‌ಆನ್ ಸ್ಪಷ್ಟವಾಗಿ ಪ್ರತಿಪಾದಿಸಿದೆ. ಅವುಗಳಲ್ಲಿ ಯಾವುದಾದರೊಂದನ್ನು ನ್ಯಾಯಪ್ರಕಾರ ಪುರಾವೆಗಳನ್ನು ಮುಂದಿಟ್ಟು ಅಪ್ರಾಯೋಗಿಕವೆಂದು ಸಾಬೀತುಪಡಿಸಲು ಕುರ್‌ಆನಿನ ವಿರೋಧಿಗಳಿಗೆ ಇಂದಿಗೂ ಸಾಧ್ಯವಾಗಿಲ್ಲ. ಅಥವಾ ಕುರ್‌ಆನ್ ಒಳಿತೆಂದು ಹೇಳಿರುವುದನ್ನು ಕೆಡುಕೆಂದು ಸಾಬೀತುಪಡಿಸಲು ಹಾಗೂ ಅದು ಕೆಡುಕೆಂದು ಹೇಳಿರುವುದನ್ನು ಒಳಿತೆಂದು ಸಾಬೀತುಪಡಿಸಲು ಇಂದಿನ ತನಕ ಸಾಧ್ಯವಾಗಿಲ್ಲ. ಮಾತ್ರವಲ್ಲದೆ ಕಾಲವು ಗತಿಸಿದಂತೆ ಲೋಕವು ಅರಿಯದಂತೆಯೇ ಕುರ್‌ಆನ್ ಪ್ರತಿಪಾದಿಸುತ್ತಿರುವ ಉದಾತ್ತ ಮೌಲ್ಯದ ಮಹತ್ವವನ್ನು ಮನಗಾಣುತ್ತದೆ. ಪವಿತ್ರ ಕುರ್‌ಆನಿನ ಮೇಲಿರುವ ಕುರುಡು ದ್ವೇಷವನ್ನು ದೂರವಿಟ್ಟು ನಿಷ್ಪಕ್ಷಪಾತವಾಗಿ ಅದರ ಅಧ್ಯಯನ ಮಾಡುವವರಿಗೆ ಖಂಡಿತವಾಗಿಯೂ ಈ ವಾಸ್ತವಿಕತೆ ಸ್ಪಷ್ಟವಾಗಿ ಗೋಚರಿಸುತ್ತದೆ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.

“ನಿಶ್ಚಯವಾಗಿಯೂ ಈ ಕುರ್‌ಆನ್ ಅತ್ಯಂತ ನೇರ ಮಾರ್ಗವನ್ನು ತೋರಿಸಿಕೊಡುತ್ತದೆ. ಇದನ್ನು ಸ್ವೀಕರಿಸಿಕೊಂಡು ಸತ್ಕರ್ಮಗಳನ್ನೆಸಗಿದವರಿಗೆ ದೊಡ್ಡ ಸತ್ಫಲವಿದೆಯೆಂಬ ಸುವಾರ್ತೆಯನ್ನು ನೀಡುತ್ತದೆ.” (17:9)

ಲೈಂಗಿಕ ಸದಾಚಾರ ಹಾಗೂ ಗೌರವಾನ್ವಿತ ವಸ್ತ್ರಧಾರಣೆಯ ಕುರಿತು ಕುರ್‌ಆನಿನ ಹೇಳಿಕೆ ಉದಾಹರಣೆಗಳು ಮಾತ್ರವಾಗಿದೆ. ಪವಿತ್ರ ಕುರ್‌ಆನ್ ವ್ಯಭಿಚಾರವನ್ನು ಮಾತ್ರವಲ್ಲದೆ ಅದರ ಸಮೀಪ ಸುಳಿಯುವುದನ್ನು ಕೂಡಾ ಪಾಪವೆಂದು ಪರಿಗಣಿಸಿದೆ.

“ವ್ಯಭಿಚಾರದ ಹತ್ತಿರವೂ ಸುಳಿಯಬೇಡಿರಿ. ಅದು ಅತಿ ಹೀನ ಕಾರ್ಯ ಮತ್ತು ಅತ್ಯಂತ ಕೆಟ್ಟ ಮಾರ್ಗ.” (17:32)

ಇಸ್ಲಾಮ್ ಗೌರವಾನ್ವಿತ ರೀತಿಯ ವಸ್ತ್ರಧಾರಣೆಯು ಪಾತಿವ್ರತ್ಯದ ಲಕ್ಷಣವೆಂದು ಕಲಿಸಿಕೊಡುತ್ತದೆ. ಇಂತಹ ವಸ್ತ್ರಧಾರಣೆ ಸ್ತ್ರೀಯರ ಸುರಕ್ಷಿತತೆ ಹಾಗೂ ಸಾಮಾಜಿಕ ಸದಾಚಾರಕ್ಕೆ ಅನುಗುಣವಾಗಿದೆಯೆಂದು ಅನುಭವದ ಮೂಲಕವೇ ಸ್ಪಷ್ಟಗೊಂಡಿರುವ ವಾಸ್ತವ ಸಂಗತಿಯಾಗಿದೆ.

ಕುರ್‌ಆನ್ ಹೇಳುತ್ತದೆ: “ಪ್ರವಾದಿಯವರೇ, ತಮ್ಮ ಪತ್ನಿಯರೊಡನೆ ಪುತ್ರಿಯರೊಡನೆ, ಸತ್ಯವಿಶ್ವಾಸಿನಿಯರೊಡನೆ ತಮ್ಮ ಮೇಲೆ ತಮ್ಮ ಚಾದರಗಳ ಸೆರಗನ್ನು ಇಳಿಸಿಕೊಳ್ಳಬೇಕೆಂದು ಹೇಳಿಬಿಡಿರಿ. ಅವರು ಗುರುತಿಸಲ್ಪಡುವಂತಾಗಲಿಕ್ಕೂ ಸತಾಯಿಸಲ್ಪಡದಿರಲಿಕ್ಕೂ ಇದು ಹೆಚ್ಚು ಸೂಕ್ತವಾದ ವಿಧಾನ. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.” (33:59)

“(ಪ್ರವಾದಿಯವರೇ) ಸತ್ಯವಿಶ್ವಾಸಿಗಳೊಡನೆ ತಮ್ಮ ದೃಷ್ಟಿಗಳನ್ನು ಕೆಳಗಿರಿಸಿಕೊಳ್ಳಲಿಕ್ಕೂ ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿಕ್ಕೂ

ಹೇಳಿರಿ. ಇದು ಅವರ ಪಾಲಿಗೆ ಹೆಚ್ಚು ಪರಿಶುದ್ಧವಾದ ಕ್ರಮವಾಗಿದೆ. ಅಲ್ಲಾಹನು ಅವರು ಮಾಡುವುದೆಲ್ಲವನ್ನೂ ಅರಿಯುವವನಾಗಿ-ದ್ದಾನೆ. ಸತ್ಯವಿಶ್ವಾಸಿನಿಯರೊಡನೆ ಹೇಳಿರಿ. ಅವರು ತಮ್ಮ ದೃಷ್ಟಿ-ಗಳನ್ನು ಕೆಳಗಿರಿಸಿಕೊಳ್ಳಲಿ ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿ ಮತ್ತು ತಮ್ಮ ಶೃಂಗಾರಗಳನ್ನು ತೋರಿಸದಿರಲಿ. (ಆದರೆ) ಸ್ವಯಂ ಪ್ರಕಟವಾಗುವುದರ ಹೊರತು. ಮತ್ತು ತಮ್ಮ ಎದೆಯ ಮೇಲೆ ತಮ್ಮ ಮೇಲು ಹೊದಿಕೆಯ ಸೆರಗನ್ನು ಹಾಕಿಕೊಂಡಿರಲಿ." (24:31)

5. ಭವಿಷ್ಯವಾಣಿಗಳ ಸಾಕಾರ.

ಅನಕ್ಷರಸ್ಥರಾದ ಪ್ರವಾದಿ ಮುಹಮ್ಮದ್(ﷺ) ರ ಮೂಲಕ ಲೋಕವು ಆಲಿಸಿದ ಕುರ್‌ಆನಿಕ್ ವಚನಗಳು ಅಪ್ಪಟ ದೈವಿಕವಾಗಿದೆ ಎನ್ನು-ವುದಕ್ಕೆ ಅದರ ಭವಿಷ್ಯವಾಣಿಗಳು ಸಾಕಾರಗೊಂಡಿರುವುದು ಮತ್ತೊಂದು ಪುರಾವೆಯಾಗಿದೆ.

ಉದಾಹರಣೆಗೆ, ಪವಿತ್ರ ಕುರ್‌ಆನಿನ 30ನೇ ಅಧ್ಯಾಯವಾದ ಅರ್ರೂಮ್ ಪ್ರವಾದಿ(ﷺ) ಯವರ ಮಕ್ಕಾ ಜೀವನದ ಕಾಲಘಟ್ಟ-ದಲ್ಲಿ ಅವತೀರ್ಣಗೊಂಡಿತು. ಅದು ಪರ್ಷಿಯಾ ಮತ್ತು ರೋಮ್ ಜಗತ್ತಿನ ಪ್ರಬಲ ಶಕ್ತಿಯಾಗಿದ್ದ ಕಾಲವಾಗಿತ್ತು. ಅದರ ಮಧ್ಯೆ ಸಮಾನಶಕ್ತಿಗಳ ನಡುವೆ ನಡೆಯುವಂತೆ ಹಲವು ಸಂಘರ್ಷ ಮತ್ತು ಯುದ್ಧಗಳು ನಡೆದಿತ್ತು. ಪರ್ಷಿಯಾದವರು ಅಗ್ನಿಪೂ-ಜಕರಾಗಿದ್ದ ಬಹುದೇವಾರಾಧಕರಾಗಿದ್ದರು. ರೋಮಿನವರು ತೌರಾತ್ ಮತ್ತು ಇಂಜೀಲಿನ ವಕ್ತಾರರಾಗಿ ಗುರುತಿಸಲ್ಪಡುತ್ತಿದ್ದ ಗ್ರಂಥದವರಾಗಿದ್ದರು. ಮುಸ್ಲಿಮರಿಗೆ ಪರ್ಷಿಯಾದವರಿಗಿಂತ ತಮಗೆ ಹೆಚ್ಚು ನಿಕಟರಾಗಿದ್ದ ರೋಮನ್ನರು ವಿಜೇತರಾಗಬೇಕೆಂದು ಬಯಸುತ್ತಿದ್ದರು. ಆದರೆ ಫಲಿತಾಂಶ ಇದಕ್ಕೆ ತದ್ವಿರುದ್ಧವಾಗಿತ್ತು. ಪರ್ಷಿಯಾ ರೋಮ್‌ನ ಮೇಲೆ ದಿಗ್ವಿಜಯ ಸಾಧಿಸಿತು. ಇನ್ನು ಮುಂದೆ ರೋಮ್ ಪರ್ಷಿಯಾದ ಮುಂದೆ ತಲೆಯೆತ್ತಿ ನಿಲ್ಲಲಾಗದ ರೀತಿಯಲ್ಲಿ ಸಂಪೂರ್ಣವಾಗಿ ಸೋತು ಸುಣ್ಣವಾಗಿತ್ತೆಂದೇ ಎಲ್ಲರೂ ಭಾವಿಸಿದ್ದರು. ಈ ಸಂದರ್ಭದಲ್ಲಿ ಪವಿತ್ರ ಕುರ್‌ಆನಿನ ಈ ಕೆಳಗಿನ ಸೂಕ್ತಿಯು ಅವತೀರ್ಣಗೊಂಡಿತು.

"ಅಲಿಫ್-ಲಾಂ-ಮೀಮ್. ರೋಮನ್ನರು ಪರಾಜಿತರಾದರು ಮತ್ತು ತಮ್ಮ ಈ ಪರಾಜಯದ ತರುವಾಯ ಕೆಲವೇ ವರ್ಷಗಳಲ್ಲಿ ಅವರು ವಿಜಯಿಗಳಾಗುವರು. ಹಿಂದೆಯೂ ಇನ್ನು ಮುಂದೆಯೂ ಅಲ್ಲಾಹನದ್ದೇ ಪ್ರಭುತ್ವವಿದೆ. ಆ ದಿನವು ಅಲ್ಲಾಹ್ ದಯಪಾಲಿಸಿದ ವಿಜಯಕ್ಕಾಗಿ ಮುಸ್ಲಿಮರು ಸಂತೋಷವನ್ನಾಚರಿಸುವ ದಿನವಾಗಿ-ರುವುದು. ಅಲ್ಲಾಹನು ತಾನಿಚ್ಛಿಸಿದವರಿಗೆ ಸಹಾಯ ಮಾಡುತ್ತಾನೆ. ಮತ್ತು ಅವನು ಮಹಾ ಪ್ರಬಲನೂ ಕರುಣಾನಿಧಿಯೂ ಆಗಿದ್ದಾನೆ. ಇದು ಅಲ್ಲಾಹನು ಮಾಡಿದ ವಾಗ್ದಾನ. ಅಲ್ಲಾಹನು ಎಂದೂ ತನ್ನ ವಾಗ್ದಾನವನ್ನು ಉಲ್ಲಂಘಿಸುವುದಿಲ್ಲ. ಆದರೆ ಹೆಚ್ಚಿನವರು ತಿಳಿಯು-ವುದಿಲ್ಲ. ಜನರು ಲೌಕಿಕ ಜೀವನದ ಬಾಹ್ಯ ಮುಖವನ್ನು ಮಾತ್ರ ತಿಳಿಯುತ್ತಾರೆ ಮತ್ತು ಪರಲೋಕದ ಕುರಿತು ಸ್ವಯಂ ಬೋಧಶೂ-ನ್ಯರಾಗಿದ್ದಾರೆ." (30:1-7)

ಈ ವಚನ ಅವತೀರ್ಣಗೊಂಡಾಗ ಇದನ್ನು ತೀರಾ ಅಸಾಧ್ಯವೆಂದು ಭಾವಿಸಿದ ಬಹುದೇವಾರಾಧಕರು ಮುಸ್ಲಿಮರೊಂದಿಗೆ ಪಣತೊಡಲು ಕೂಡಾ ಮುಂದಾಗಿದ್ದರು. ಆದರೆ ಕೆಲವೇ ವರ್ಷ-ಗಳಲ್ಲಿ ಕುರ್‌ಆನ್ ಹೇಳಿದಂತೆ ರೋಮನ್ನರ ಆಶ್ಚರ್ಯಕರವಾದ ಒಂದು ವಿಜಯವನ್ನು ಲೋಕವು ದರ್ಶಿಸಿತು.

6. ಸ್ಪಷ್ಟವಾದ ಚಾರಿತ್ರಿಕ ವಿವರಣೆ

ಪ್ರವಾದಿ(ಸ) ಯವರ ಜನನಕ್ಕಿಂತ ಅದೆಷ್ಟೋ ಶತಮಾನಗಳ ಹಿಂದೆ ಗತಿಸಿಹೋದ ಪ್ರವಾದಿಗಳು ಹಾಗೂ ಜನಸಮುದಾಯಗಳ ಕುರಿತು ಕುರ್‌ಆನ್ ಪ್ರತಿಪಾದಿಸುತ್ತದೆ. ಅವರ ಬಗ್ಗೆ ಜನರ ನಡುವೆಯಿದ್ದ ವದಂತಿ, ದಂತಕಥೆ, ಗೊಡ್ಡು ಪುರಾಣಗಳನ್ನು ಕಳಚಿ ಹಾಕಿ ಕುರ್‌ಆನ್ ನೈಜ ಚರಿತ್ರೆಯನ್ನು ಅನಾವರಣಗೊಳಿಸಿತು. ಇತಿಹಾಸದ ವಿಷಯದಲ್ಲಿ ಇತರರಿಗೆ ಸಂಭವಿಸಿದ ಪ್ರಮಾದಗಳು ಕುರ್‌ಆನ್‌ಗೆ ಸಂಭವಿಸಿಲ್ಲವೆಂದು ಹಲವು ಸಂಶೋಧಕರೆ ಒಪ್ಪಿಕೊಂಡಿದ್ದಾರೆ.

ಉದಾಹರಣೆಗೆ, ಈಜಿಪ್ಟಿನ ಆಡಳಿತಗಾರರನ್ನು ಮೊದಲು ದೊರೆ (ಮಲಿಕ್) ಎಂದು ಕರೆಯಲಾಗುತ್ತಿತ್ತು. ಕ್ರಿ.ಪೂ. 1539 ರ ತನಕ ಇದು ಹೀಗೆಯೇ ಮುಂದುವರಿದಿತ್ತು. ನಂತರ ಫಿರ್‌ಔನ್ (ಫರೋವ) ಎಂಬ ಹೆಸರನ್ನು ಬಳಸಲು ಪ್ರಾರಂಭಿಸಲಾಯಿತು. ಪ್ರವಾದಿ ಯೂಸುಫ್(ಅ) ಮತ್ತು ಮೂಸಾ(ಅ) ರ ಚರಿತ್ರೆಯನ್ನು ವಿವರಿಸುವಾಗ ಕುರ್‌ಆನಿನ ಪ್ರಯೋಗಗಳಲ್ಲಿ ಈ ಖಚಿತತೆಯ-ನ್ನು ನೋಡಬಹುದಾಗಿದೆ.

7. ವೈರುಧ್ಯಗಳಿಲ್ಲವೆಂಬ ಘೋಷಣೆ

23 ವರ್ಷಗಳ ಕಾಲ ವಿಭಿನ್ನ ಸನ್ನಿವೇಶಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ಅವತೀ-ರ್ಣಗೊಂಡ ಕುರ್‌ಆನಿನ ಸೂಕ್ತಿಗಳಲ್ಲಿ ಪರಸ್ಪರ ವೈರುಧ್ಯಗಳಾಗಲಿ, ಸೈದ್ಧಾಂತಿಕ ಗೊಂದಲಗಳಾಗಲಿ ಇಲ್ಲ. ಮಾತ್ರವಲ್ಲದೆ ಅವರು ಪರಸ್ಪರ ಪೂರಕವಾದ ವಿವರಣೆಗಳಾಗಿದ್ದು ಒಂದು ಇನ್ನೊಂದನ್ನು ಸಮರ್ಥಿಸುತ್ತವೆ. ಆ ಕಾಲದಲ್ಲಿ ಉಂಟಾದ ಜ್ಞಾನರಂಗದ ಏರುಪೇರು

*22 ನೇ ಪುಟಕ್ಕೆ*

# ರಯ್ಯಾನ್ ಎಂಬ ಕವಾಟದ ಅತಿಥಿ

ಉಪವಾಸವೃತವು ಮನುಷ್ಯನನ್ನು ಸತ್ಯಮಾರ್ಗದಲ್ಲಿನ ಹೋರಾಟಕ್ಕೆ ಅಣಿಗೊಳ್ಳುವಂತೆ ಮಾಡುತ್ತದೆ. ಆತನ ಆಂತರಿಕ ಬಾಹ್ಯ ಪ್ರಭೆಯಾಗಿ ಹೊರಹೊಮ್ಮುತ್ತದೆ. ತ್ಯಾಗ ಸಂದರ್ಭಗಳಲ್ಲಿ ಅಲ್ಲಾಹನ ಸಂಪ್ರೀತಿಗೋಸ್ಕರ ಹಸಿವು ದಾಹಗಳನ್ನು ನಿರ್ಲಕ್ಷಿಸಿ ಕಠಿಣ ದುಡಿಮೆ ಮಾಡುವುದು ಅನಿವಾರ್ಯವಾಗಿರುತ್ತದೆ. ಈ ಸಹನೆ ಕರಗತ ಮಾಡಿಕೊಳ್ಳಲು ಹಾಗೂ ಕಷ್ಟದ ವೇಳೆಗಳಲ್ಲಿ ಸಂಕಷ್ಟಭರಿತ ಅನುಭವ ಗಳಿಸಲು ಅತ್ಯಂತ ಸೂಕ್ತ ಉಪಾಧಿ ಉಪವಾಸ ವೃತವೇ ಆಗಿದೆ. ಈ ಕಾರಣದಿಂದಲೇ ಪ್ರವಾದಿ(ﷺ) ಯವರು ಈ ತಿಂಗಳನ್ನು ಸಹನೆಯ ತಿಂಗಳು ಎಂದು ಕರೆದಿದ್ದಾರೆ.

ಸತ್ಪಥದ ಸಂದೇಶ, ಪಾಪವಿಮೋಚನೆ ಹಾಗೂ ಕರುಣೆಯ ವಾಗ್ದಾನದೊಂದಿಗೆ ಮತ್ತೆ ಅತಿಥಿಯಾಗಿ ಬಂದಿರುವ ಪಾವನ ರಮದಾನ್ ಸತ್ಯವಿಶ್ವಾಸಿಗಳ ಹೃದಯದಲ್ಲಿ ಭರವಸೆಯ ಬೆಳಕನ್ನು ಚೆಲ್ಲಿದೆ.

ವೃತದ ತಿಂಗಳಾದ ರಮದಾನಿನಲ್ಲಿ ಹಗಲಿಡೀ ಅನ್ನಪಾನೀಯಗಳನ್ನು ತೊರೆಯುವ ಸತ್ಯವಿಶ್ವಾಸಿಗಳು, ಪಾಪಗಳನ್ನು ತೊಳೆದು ಶುದ್ಧಗೊಳಿಸಿ ಪುಣ್ಯಗಳನ್ನು ವರ್ಧಿಸುವ ಮೂಲಕ ಸೃಷ್ಟಿಕರ್ತನೂ ಒಡೆಯನೂ ಆಗಿರುವ ಅಲ್ಲಾಹನಿಗೆ ನಿಕಟರಾಗುವ ಪರಿಶ್ರಮದಲ್ಲಿದ್ದಾರೆ.

ಈ ಪುಣ್ಯ ಮಾಸದಲ್ಲಿ ನಮಗಾಗಿ ಸ್ವರ್ಗದ ಕವಾಟಗಳು ತೆರೆಯಲ್ಪಟ್ಟು ನರಕದ ಕವಾಟಗಳು ಮುಚ್ಚಲ್ಪಡುತ್ತವೆ.

ಈ ಸುವರ್ಣಾವಕಾಶವನ್ನು ವ್ಯರ್ಥಗೊಳಿಸದೆ ನಾವು 'ರಯ್ಯಾನ್' ಎಂಬ ಬಾಗಿಲಿನ ಮೂಲಕ ಸ್ವರ್ಗಕ್ಕೆ ಆಮಂತ್ರಿಸಲ್ಪಡುವ ಉಪವಾಸಿಗರಲ್ಲಿ ಸೇರಲು ಗಮನಹರಿಸಬೇಕು.

ರಮದಾನ್ ಅನಾವಶ್ಯಕ ಮಾತುಗಳು ಹಾಗೂ ನಿಷೇಧಿಸ್ಪಟ್ಟ ಪ್ರವೃತ್ತಿಗಳಿಂದ ಸಂಪೂರ್ಣವಾಗಿ ದೂರ ನಿಂತು ಜೀವನದಾದ್ಯಂತ ವಿಶ್ವಾಸದ ಬೇಡಿಕೆಗಳನ್ನು ಪಾಲಿಸಲು ತರಬೇತಿ ಪಡೆಯಬೇಕಾದ ದಿನಗಳಾಗಿವೆ. ಆದುದರಿಂದ ಉಪವಾಸವು ಕೇವಲ ಹೊಟ್ಟೆಗೆ ಮಾತ್ರ ಸೀಮಿತವಾಗಿರದೆ, ಕಣ್ಣು, ಕಿವಿ, ನಾಲಗೆ, ಕೈಕಾಲುಗಳು ಮತ್ತು ಮನಸ್ಸಿಗೂ ಪಸರಿಸಲಿ.

ಮಾತು, ನೋಟ, ಚಲನೆ, ಸ್ಥಬ್ಧತೆಯಲ್ಲಿಯೂ ಅದು ಪ್ರತಿಫಲಿಸಲಿ. ಸಂಕಲ್ಪವು ಶುದ್ಧವಾಗಿರುವ ಉಪವಾಸ, ಕ್ಲಪ್ತ ಸಮಯದಲ್ಲಿ ಮಸೀದಿಗೆ ತೆರಳಿ ಜಮಾಅತ್ತಾಗಿ ನಿರ್ವಹಿಸುವ ಫರ್ದ್ ನಮಾಝ್‌ಗಳು, ಅನುಬಂಧವಾದ ಸುನ್ನತ್ ನಮಾಝ್‌ಗಳು, ದಿಕ್ರ್‌ಗಳು, ತರಾವೀಹ್, ಕಿಯಾಮುಲ್ಲೈಲ್ ನಮಾಝ್‌ಗಳು, ಕುರ್‌ಆನ್ ಹದೀಸಿನ ಅಧ್ಯಯನ ಮತ್ತು ಪಾರಾಯಣ, ಪಾಪವಿಮೋಚನೆ, ನರಕ ವಿಮುಕ್ತಿ ಮತ್ತು ಸ್ವರ್ಗಪ್ರವೇಶಕ್ಕಾಗಿ ಹೃದಯಂಗಮವಾದ ಪ್ರಾರ್ಥನೆಗಳು, ಉದಾರವಾದ ದಾನಧರ್ಮಗಳು, ಪರೋಪಕಾರ ಕಾರ್ಯಕ್ರಮಗಳು, ಪ್ರತಿಫಲಾಪೇಕ್ಷೆಯಿಂದ ಬಡವರಿಗೆ ಪಾರಣೆ ಮಾಡಿಸುವುದು, ಉಪಕಾರಪ್ರದವಾದ ಜ್ಞಾನಕ್ಕಾಗಿ ವಿವಿಧ ಗ್ರಂಥಗಳ ಅಧ್ಯಯನ, ಧಾರ್ಮಿಕ ಉಪನ್ಯಾಸ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವುದು, ರೋಗಿ ಸಂದರ್ಶನ, ಕುಟುಂಬ ಸಂಬಂಧವನ್ನು ಜೋಡಿಸುವುದು, ದೇವಮಾರ್ಗದಲ್ಲಿರುವ ಪರಿಶ್ರಮಗಳು, ದೈನಂದಿನ ಕರ್ಮ, ಜೀವನಕ್ರಮ ಮತ್ತು ಆರಾಧನೆಗಳಲ್ಲಿ ಪ್ರವಾದಿಚರ್ಯೆಯನ್ನು ಅನುಗಮಿಸುವುದು,

ಸಾಧ್ಯವಾದಷ್ಟು ಸಮಯ ಆರಾಧನೆಗಾಗಿ ಮಸೀದಿಯಲ್ಲಿ ಉಳಿಯುವುದು (ವಿಶೇಷತಃ ಕೊನೆಯ ಹತ್ತರಲ್ಲಿ ಇಅ್‌ತಿಕಾಫ್ ಕೂರುವುದು) ಸಾಮರ್ಥ್ಯವಿರುವವರು ಉಮ್ರ ನಿರ್ವಹಿಸುವುದು... ಹೀಗೆ ಪುಣ್ಯದ ಅದೆಷ್ಟೋ ನಮೂನೆಗಳು ನಮ್ಮ ಮುಂದಿದೆ.

ಅತ್ಯುತ್ತಮ ಸ್ವಭಾವವು ಅತ್ಯಂತ ದೊಡ್ಡ ಒಳಿತು ಹಾಗೂ ಸಹೋದರನನ್ನು ಮುಗುಳ್ನಗೆಯೊಂದಿಗೆ ಭೇಟಿಯಾಗುವುದು ಕೂಡಾ ದಾನವೆಂದು ಹೇಳುವ ಪ್ರವಾದಿ(ﷺ) ಯವರ ವಚನಗಳನ್ನು ಸ್ಮರಿಸಿರಿ. ವಿನಯ, ಸೌಮ್ಯತೆ, ಉದಾರ ಮನಸ್ಸು, ಪ್ರಾಮಾಣಿಕತೆ, ಕ್ಷಮೆ, ಸಹಾನುಭೂತಿ ಮುಂತಾದ ಅಲಂಕಾರಗಳನ್ನು ಧರಿಸಿರಿ. ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಪರಸ್ಪರ ಒಳಿತನ್ನು ಮಾತ್ರ ವಿನಿಮಯ ಮಾಡಿಕೊಳ್ಳಿರಿ. ಈ ರೀತಿಯ ಸದ್ಗುಣಗಳು ಮತ್ತು ಸತ್ಕರ್ಮಗಳು ಕೇವಲ ರಮದಾನ್ ವಿಶೇಷ ಮಾತ್ರವಾಗದೆ ನಂತರದ ಜೀವನದಲ್ಲಿ ಸಾಧ್ಯವಾದಷ್ಟು ನೆಲೆನಿಲ್ಲಿಸುವ ಅಭಿಲಾಷೆ ಮತ್ತು ಪರಿಶ್ರಮವನ್ನು ಜೀವಂತವಾಗಿಟ್ಟುಕೊಳ್ಳಿರಿ.

ಇತರರ ಹಕ್ಕುಗಳು, ವಿಚ್ಛೇದನಗೊಂಡ ಸಂಬಂಧಗಳು, ನಮ್ಮ ಕರ್ಮಗಳನ್ನು ಅಲ್ಲಾಹನೆಡೆಗೆ ಎತ್ತಲ್ಪಡಲು ತಡೆಯಾಗಿ ಪರಿಣಮಿಸುತ್ತದೆ. ಆದುದರಿಂದ ಅನ್ಯರ ಹಕ್ಕುಗಳನ್ನು ನಾವು ಅವರಿಗೆ ಮರಳಿಸಬೇಕು. ಮನಸ್ತಾಪಗಳನ್ನು ಕೊನೆಗೊಳಿಸಿ ಸಂಬಂಧಗಳನ್ನು ಬಲಪಡಿಸಬೇಕು. ಕುಟುಂಬ, ನೆರೆಹೊರೆ, ಸ್ನೇಹಿತರು, ಸಹಪ್ರವೃತ್ತಕರು, ಸಹಪಾಠಿಗಳು ಮುಂತಾದ ಎಲ್ಲಾ ಕ್ಷೇತ್ರಗಳಲ್ಲಿ ನಮ್ಮ ಸಂಬಂಧವು ಕಳಂಕರಹಿತವಾಗಿದೆಯೆಂದು ಖಾತರಿಪಡಿಸಿಕೊಳ್ಳಬೇಕು. ಮಾತಾಪಿತರ ಸೇವೆಯಲ್ಲಿ ಚ್ಯುತಿ ಬರದಂತೆ ನೋಡಿಕೊಳ್ಳಬೇಕು. ಅವರ ತೃಪ್ತಿಯಲ್ಲಿ ಪ್ರಭುವಿನ ಸಂತೃಪ್ತಿಯೂ ಅವರ ಕೋಪದಲ್ಲಿ ಅಲ್ಲಾಹನ ಕ್ರೋಧವೂ ಅಡಕವಾಗಿದೆ.

ಉಪವಾಸದ ಉದ್ದೇಶ ತಕ್ವಾ ಅಥವಾ ಭಯಭಕ್ತಿ ಮತ್ತು ಧರ್ಮನಿಷ್ಠೆಯನ್ನು ಮೈಗೂಡಿಸಿಕೊಳ್ಳುವುದಾಗಿದೆ. ಅದಕ್ಕೆ ವಿರೋಧವಾದ ಅಥವಾ ಅಡೆತಡೆಗಳನ್ನು ಸೃಷ್ಟಿಸುವ ಯಾವುದೂ ನಮ್ಮ ಜೀವನದಲ್ಲಿ ಬರದಂತೆ ಜಾಗರೂಕರಾಗುವುದು ಉಪವಾಸದ ಪುಣ್ಯಪ್ರಾಪ್ತಿಗೆ ಅನಿವಾರ್ಯವಾಗಿದೆ. ಮುಂದಿನ ಹನ್ನೊಂದು ತಿಂಗಳ ಕಾಲ ನಮ್ಮನ್ನು ಮುನ್ನಡೆಸಬೇಕಾದ ವಿಶ್ವಾಸದಾರ್ಢ್ಯತೆ ಹಾಗೂ ಆತ್ಮ ಸಂಸ್ಕರಣೆ ಪಡೆಯಬೇಕಾದ ರಮದಾನಿನಲ್ಲೂ ಧರ್ಮನಿಷ್ಠೆ ಪಾಲಿಸಲು ನಮಗೆ ಅಸಾಧ್ಯವಾದರೆ ನಮ್ಮ ಉಪವಾಸ ಅದೆಷ್ಟು ನಿಷ್ಫಲ!? ಅದೆಷ್ಟು ನಿರರ್ಥಕ!? ಆದುದರಿಂದ ನಿಷಿದ್ಧಗಳನ್ನು ಮಾತ್ರವಲ್ಲದೆ ಅದಕ್ಕೆ ದಾರಿ ತೆರೆದುಕೊಡುವ ಕಾರ್ಯಗಳಿಂದಲೂ ದೂರವಿರಬೇಕು. ಅಹಂಕಾರ, ನಿಂದನೆ, ಕೋಪ, ಹಗೆ, ವಿದ್ವೇಷ, ಕಾಪಟ್ಯ ಮುಂತಾದ ದುರ್ಗುಣಗಳನ್ನು ತೊರೆಯಿರಿ. ರಮದಾನಿನಲ್ಲಿ ಎಲ್ಲಾ ಕೆಡುಕುಗಳಿಗೆ ತಾತ್ಕಾಲಿಕ ವಿರಾಮ ಕೊಟ್ಟು ಅದರ ನಂತರ ಪುನಃ ಆ ಕೆಡುಕಿನೆಡೆಗೆ ಸಾಗುವ ಅಭಿಲಾಷೆ ಮತ್ತು ಅಜೆಂಡಾಗಳನ್ನು ಮನಸ್ಸಿನಲ್ಲಿ ಅಡಗಿಸಿಟ್ಟು ನಡೆಸುವ ಚಟುವಟಿಕೆಗಳು ಆತ್ಮವಂಚನೆಯಾಗಿದ್ದು ಈ ಕಪಟ ಭಕ್ತಿ ನಷ್ಟವನ್ನಲ್ಲದೆ ಬೇರೇನನ್ನೂ ವರ್ಧಿಸುವುದಿಲ್ಲವೆಂದು ತಿಳಿದುಕೊಳ್ಳಬೇಕು.

ತೌಬ ಅಥವಾ ಪಶ್ಚಾತ್ತಾಪವು ಸತ್ಯವಿಶ್ವಾಸಿಗಳ ನಿರಂತರ ವೈಶಿಷ್ಟ್ಯತೆಯಾಗಿದೆ. ತೌಬಕ್ಕೆ ಹೆಚ್ಚು ಪ್ರಾಮುಖ್ಯತೆಯಿರುವ ರಮದಾನಿನಲ್ಲಿ ಆತ್ಮಾರ್ಥವಾಗಿ ಪಶ್ಚಾತ್ತಾಪಪಟ್ಟು ಪ್ರಭುವಿನೆಡೆಗೆ ಮರಳಿರಿ. ಸಂಭವಿಸಿದ ಚಿಕ್ಕಪುಟ್ಟ ಹಾಗೂ ಗಂಭೀರ ಪಾಪಗಳನ್ನು ಅಲ್ಲಾಹನ ಮುಂದೆ ನಿವೇದಿಸಿಕೊಂಡು ಅವುಗಳ ಕ್ಷಮೆಗಾಗಿ ಮೊರೆಯಿಡಲು ಏಕಾಂತವನ್ನು ಆರಿಸಿಕೊಳ್ಳಿರಿ.

ಪವಿತ್ರ ಕುರ್‌ಆನಿನ ಅವತರಣದೊಂದಿಗೆ ರಮದಾನ್ ಅತ್ಯಂತ ಪವಿತ್ರವಾಯಿತು. ಅದರ ಹೆಸರಲ್ಲಿಯೇ ನಾವು ವ್ರತ ಅನುಷ್ಠಿಸಲು ಆದೇಶಿಸಲ್ಪಟ್ಟಿದ್ದೇವೆ. ವ್ರತದ ಇತರ ನಿಯಮಗಳನ್ನೂ ಚಾಚೂತಪ್ಪದಂತೆ ನಿಷ್ಠೆಯಿಂದ ಪಾಲಿಸುವವರು ಕೂಡಾ ಮಾನವತೆಯ ಮಾರ್ಗದರ್ಶನಕ್ಕಾಗಿಯೇ ಅವತೀರ್ಣಗೊಂಡ ಕುರ್‌ಆನಿನ ದಿವ್ಯಸಂದೇಶವೇನೆಂದು ಜೀವನದಲ್ಲಿ ಒಂದಾವರ್ತಿಯಾದರೂ ತಿಳಿಯಲು ಪ್ರಯತ್ನಿಸಿರುವುದಿಲ್ಲ ಎನ್ನುವ ವಾಸ್ತವಿಕತೆ ಅದೆಷ್ಟು ವಿಚಿತ್ರ. ಈ ರಮದಾನನ್ನು ನಾವು ಕುರ್‌ಆನನ್ನು ಅರ್ಥಸಮೇತ ಪಾರಾಯಣ ಮಾಡಲು ಹಾಗೂ ಅದರ ಆಳದಲ್ಲಿರುವ ಆಶಯವನ್ನು ಅರಿಯಲು ಸದ್ಬಳಕೆ ಮಾಡಿಕೊಳ್ಳಬೇಕು.

ನಮ್ಮಲ್ಲಿ ಹಲವರು ಅದೆಷ್ಟು ಬೇಗ ರಮದಾನ್ ಬಂದಿದೆಯೆಂದು ಹೇಳುವುದಿದೆ. ದಿನಗಳು ಉರುಳಿದಾಗ ಅದೆಷ್ಟು ಬೇಗ ರಮದಾನ್ ಮುಗಿಯಿತು ಎಂದೂ ಹೇಳುವುದಿದೆ. ಆದರೆ ರಮದಾನ್ ನಮ್ಮಲ್ಲಿ ಅದೆಷ್ಟರ ಮಟ್ಟಿಗೆ ಬದಲಾವಣೆಯನ್ನು ಸೃಷ್ಟಿಸಿದೆಯೆಂದು ಆತ್ಮಾವಲೋಕನ ಮಾಡಲು ಹೆಚ್ಚಿನವರು ಮರೆತಿರುತ್ತಾರೆ. ಈ ರಮದಾನ್ ನಮ್ಮಲ್ಲಿ ಪ್ರತಿಯೊಬ್ಬನನ್ನು ಹೊಸ ಮನುಷ್ಯರನ್ನಾಗಿ ಮಾಡಬೇಕು. ನವೀಕರಿಸಲ್ಪಟ್ಟ ವಿಶ್ವಾಸ, ಶುದ್ಧೀಕರಣಗೊಂಡ ಮನಸ್ಸು, ಒಳಿತಿನೊಂದಿಗೆ ಆಸಕ್ತಿ ಹಾಗೂ ಕೆಡುಕನ್ನು ದ್ವೇಷಿಸುವ ಉತ್ತಮ ಮನುಷ್ಯರು. ಅಲ್ಲಾಹ್, ಅವನ ಗ್ರಂಥ ಹಾಗೂ ಅವನ ಪ್ರವಾದಿಯೊಂದಿಗಿರುವ ಬದ್ಧತೆ, ಯಾವ ಪ್ರಚೋದನೆ ಮತ್ತು ಆಮಿಷಕ್ಕೂ ಬಲಿಯಾಗದೆ ಅಲ್ಲಾಹನ ಧರ್ಮದ ವಿಧಿ-ನಿಷೇಧಗಳನ್ನು ಪಾಲಿಸುವ ಮನೋದಾರ್ಢ್ಯತೆ, ಪರಲೋಕದಲ್ಲಿ ಲಭಿಸಲಿರುವ ಪ್ರತಿಫಲ ವಾಗ್ದಾನದಲ್ಲಿರುವ ಭರವಸೆಯು ಮೇಲಿಂದ ಮೇಲೆ

*35 ನೇ ಪುಟಕ್ಕೆ*

# ಫಿತ್ರ್ ಝಕಾತ್

ಫಿತ್ರ್ ಝಕಾತ್ ಸ್ವೀಕರಿಸಲು ಅರ್ಹರು ಬಡವರು. ಸಾಲವಿದ್ದು ಅದನ್ನು ಸಂದಾಯ ಮಾಡಲು ಒದ್ದಾಡುವವರಿಗೂ ಅವರಿಗೆ ಅವಶ್ಯವಿದ್ದಷ್ಟು ನೀಡಬಹುದು. ಫಿತ್ರ್ ಝಕಾತನ್ನು ಒಬ್ಬರಿಗಿಂತ ಹೆಚ್ಚು ಬಡವರಿಗೆ ನೀಡಬಹುದು. ಅಥವಾ ಒಂದು ದೊಡ್ಡ ಚೀಲ ಫಿತ್ರ್ ಝಕಾತನ್ನು ಒಬ್ಬನೇ ಬಡವನಿಗೂ ನೀಡಬಹುದು. ಕಾರಣ, ಪ್ರವಾದಿ(ﷺ) ರವರು ಕೊಡಬೇಕಾದ ಪ್ರಮಾಣವನ್ನು ನಿರ್ಣಯಿಸಿದ್ದಾರೆಯೇ ವಿನಾ ಯಾರಿಗೆ ಎಷ್ಟು ಕೊಡಬೇಕೆಂದು ನಿರ್ಣಯಿಸಿಲ್ಲ.

✍ ಶೈಖ್ ಮುಹಮ್ಮದ್ ಇಬ್ನ್ ಸಾಲಿಹ್ ಅಲ್‌ಉಸೈಮೀನ್

ಸರ್ವಜ್ಞನೂ, ಯುಕ್ತಿಪೂರ್ಣನೂ, ಅತ್ಯುನ್ನತನೂ, ಮಹೋನ್ನತನೂ ಆದ ಅಲ್ಲಾಹನಿಗೆ ಸರ್ವಸ್ತುತಿ. ಅವನು ಎಲ್ಲ ವಸ್ತುಗಳನ್ನು ಸೃಷ್ಟಿಸಿ ಅವುಗಳನ್ನು ಸರಿಯಾದ ವಿಧದಲ್ಲಿ ನಿರ್ಣಯಿಸಿದ್ದಾನೆ. ಸೃಷ್ಟಿಗಳಿಗೊಂದು ವಿವರಣೆ ಮತ್ತು ಒಳದೃಷ್ಟಿಯಾಗಿ ಅವನು ತನ್ನ ಪರಿಪೂರ್ಣ ಯುಕ್ತಿಯಿಂದ ಶರೀಅತ್‌ಗಳನ್ನು ನಿರ್ಮಿಸಿದ್ದಾನೆ. ಅವನ ಸಮಗ್ರ ವಿಶೇಷಣಗಳಿಗಾಗಿ ನಾನು ಅವನನ್ನು ಸ್ತುತಿಸುತ್ತೇನೆ. ಅವನ ವಿಪುಲ ಅನುಗ್ರಹಗಳಿಗಾಗಿ ನಾನು ಅವನಿಗೆ ಕೃತಜ್ಞತೆ ಸಲ್ಲಿಸುತ್ತೇನೆ.

ಅಲ್ಲಾಹನ ಹೊರತು ಅನ್ಯ ಸತ್ಯ ಆರಾಧ್ಯರಿಲ್ಲ, ಅವನು ಏಕೈಕನು ಮತ್ತು ಸಹಭಾಗಿಗಳಿಲ್ಲದವನೆಂದು ನಾನು ಸಾಕ್ಷ್ಯ ವಹಿಸುತ್ತೇನೆ. ಆಧಿಪತ್ಯ ಅವನಿಗೆ ಸೇರಿದ್ದು ಮತ್ತು ಸರ್ವಸ್ತುತಿಯು ಅವನಿಗೆ ಮೀಸಲು. ಅವನು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನು.

ಶುಭವಾರ್ತೆ ತಿಳಿಸುವವರು ಮತ್ತು ಮುನ್ನೆಚ್ಚರಿಕೆ ನೀಡುವವರಾದ ಮುಹಮ್ಮದ್(ﷺ) ರವರು ಅವನ ದಾಸ ಮತ್ತು ಸಂದೇಶವಾಹಕರೆಂದು ನಾನು ಸಾಕ್ಷ್ಯ ವಹಿಸುತ್ತೇನೆ. ಅವರ ಮೇಲೆ, ಅವರ ಕುಟುಂಬದ ಮೇಲೆ, ಅವರ ಸಹಾಬಾಗಳ ಮೇಲೆ ಮತ್ತು ಪ್ರತಿಫಲ ದಿನದ ತನಕ ಅವರನ್ನು ಅತ್ಯುತ್ತಮವಾಗಿ ಅನುಸರಿಸಿದವರ ಮೇಲೆ ಅಲ್ಲಾಹನ ಸಲಾತ್ ಮತ್ತು ಸಲಾಂ ಇರಲಿ.

ಸಹೋದರರೇ! ನಿಮ್ಮ ಈ ಆದರಣೀಯ ತಿಂಗಳು, ರಮದಾನ್ ತಿಂಗಳು, ವಿದಾಯಕೋರಲು ಸಿದ್ಧವಾಗಿ ನಿಂತಿದೆ. ಕೆಲವು ಸಮಯಗಳ ಹೊರತು ಬೇರೇನೂ ಬಾಕಿಯುಳಿದಿಲ್ಲ. ನಿಮ್ಮಲ್ಲಿ ಸತ್ಕರ್ಮಿಯಾಗಿರವವನು ಈ ತಿಂಗಳಲ್ಲಿ ಸತ್ಕರ್ಮವೆಸಗುವ ಭಾಗ್ಯ ದಯಪಾಲಿಸಿದ್ದಕ್ಕಾಗಿ ಅಲ್ಲಾಹನನ್ನು ಸ್ತುತಿಸಲಿ ಮತ್ತು ಅದನ್ನು ಸ್ವೀಕರಿಸುವಂತೆ ಬೇಡಿಕೊಳ್ಳಲಿ. ನಿಮ್ಮಲ್ಲಿ ಅಸಡ್ಡೆ ವಹಿಸಿದವನು ಅಲ್ಲಾಹನ ಕಡೆಗೆ ಪಶ್ಚಾತ್ತಾಪಪಟ್ಟು ಮರಳಲಿ ಮತ್ತು ತಾನು ಮಾಡಿದ ಕೊರತೆಗಾಗಿ ಕ್ಷಮೆಯನ್ನು ಬೇಡಿಕೊಳ್ಳಲಿ. ಮರಣಕ್ಕೆ ಮುಂಚೆ ಮಾಡುವ ಕ್ಷಮೆಯಾಚನೆಯು ಸ್ವೀಕೃತವಾಗಿದೆ.

ಸಹೋದರರೇ! ಈದ್ ನಮಾಝ್‌ಗೆ ಮುಂಚೆ ಫಿತ್ರ್ ಝಕಾತನ್ನು ನೀಡುವಂತೆ ಅಲ್ಲಾಹು ನಿಮಗೆ ನಿರ್ದೇಶಿಸಿದ್ದಾನೆ. ನಾವು ಈ ಸಮಾವೇಶದಲ್ಲಿ ಫಿತ್ರ್ ಝಕಾತ್‌ನ ನಿಯಮ, ಯುಕ್ತಿ, ಫಿತ್ರ್ ಝಕಾತ್ ನೀಡಬೇಕಾದ ಆಹಾರದ ವಿಧ, ಅದರ ಪ್ರಮಾಣ, ನೀಡಬೇಕಾದ ಕಡ್ಡಾಯ ಸಮಯ, ರೀತಿ ಮತ್ತು ಸ್ಥಳದ ಕುರಿತು ಮಾತನಾಡುವೆವು.

### ಫಿತ್ರ್ ಝಕಾತ್‌ನ ನಿಯಮ:

ಫಿತ್ರ್ ಝಕಾತ್ ಅಲ್ಲಾಹನ ಸಂದೇಶವಾಹಕರು(ﷺ) ಮುಸ್ಲಿಮರ

ಮೇಲೆ ಕಡ್ಡಾಯಗೊಳಿಸಿದ ಒಂದು ಕಡ್ಡಾಯ ಕರ್ಮವಾಗಿದೆ. ಅಲ್ಲಾಹನ ಸಂದೇಶವಾಹಕರು(ﷺ) ಯಾವುದಾದರೂ ವಿಷಯವನ್ನು ಕಡ್ಡಾಯಗೊಳಿಸಿದರೆ ಅಥವಾ ಆಜ್ಞಾಪಿಸಿ-ದರೆ ಅದು ಅಲ್ಲಾಹು(ﷻ) ಕಡ್ಡಾಯಗೊಳಿಸಿದಂತೆ ಅಥವಾ ಆಜ್ಞಾಪಿಸಿದಂತೆಯಾಗಿದೆ.

ಅಲ್ಲಾಹು(ﷻ) ಹೇಳುತ್ತಾನೆ:

﴿مَّن يُطِعِ ٱلرَّسُولَ فَقَدۡ أَطَاعَ ٱللَّهَۖ وَمَن تَوَلَّىٰ فَمَآ أَرۡسَلۡنَٰكَ عَلَيۡهِمۡ حَفِيظٗا ﴿٨٠﴾﴾

“ರಸೂಲರನ್ನು ಅನುಸರಿಸಿದವನು ಅಲ್ಲಾಹನನ್ನು ಅನುಸರಿಸಿದ್ದಾನೆ. ಇನ್ನು ಯಾರಾದರೂ ವಿಮುಖರಾಗುವುದಾದರೆ ನಾನು ತಮ್ಮನ್ನು ಅವರ ಮೇಲೆ ರಕ್ಷಕನನ್ನಾಗಿ ಕಳುಹಿಸಿಲ್ಲ.” (ಅನ್ನಿಸಾಅ್ 80).

ಅಲ್ಲಾಹು(ﷻ) ಹೇಳುತ್ತಾನೆ:

﴿وَمَن يُشَاقِقِ ٱلرَّسُولَ مِنۢ بَعۡدِ مَا تَبَيَّنَ لَهُ ٱلۡهُدَىٰ وَيَتَّبِعۡ غَيۡرَ سَبِيلِ ٱلۡمُؤۡمِنِينَ نُوَلِّهِۦ مَا تَوَلَّىٰ وَنُصۡلِهِۦ جَهَنَّمَۖ وَسَآءَتۡ مَصِيرًا ﴿١١٥﴾﴾

“ಮಾರ್ಗದರ್ಶನವು ಸ್ಪಷ್ಟವಾದ ಬಳಿಕವೂ ರಸೂಲರಿಗೆ ವಿರುದ್ಧವಾಗಿ ಚಲಿಸಿ ವಿಶ್ವಾಸಿಗಳ ಮಾರ್ಗವಲ್ಲದ ಬೇರೆ ಮಾರ್ಗವನ್ನು ಹಿಂಬಾಲಿ-ಸುವವನು, ಅವನು ತಿರುಗಿದೆಡೆಗೆ ನಾವು ಅವನನ್ನು ತಿರುಗಿಸುವೆವು ಮತ್ತು ನರಕಾಗ್ನಿಯಲ್ಲಿ ಉರಿಸುವೆವು. ಅದು ಬಹಳ ಕೆಟ್ಟ ತಲುಪು-ದಾಣವಾಗಿದೆ.” (ಅನ್ನಿಸಾಅ್ 115).

ಅಲ್ಲಾಹು(ﷻ) ಹೇಳುತ್ತಾನೆ:

﴿وَمَآ ءَاتَىٰكُمُ ٱلرَّسُولُ فَخُذُوهُ وَمَا نَهَىٰكُمۡ عَنۡهُ فَٱنتَهُواْۚ﴾

“ರಸೂಲರು ನಿಮಗೆ ಏನನ್ನು ನೀಡುತ್ತಾರೋ ಅದನ್ನು ಸ್ವೀಕರಿಸಿ ಮತ್ತು ಅವರು ಯಾವುದನ್ನು ವಿರೋಧಿಸುತ್ತಾರೋ ಅದರಿಂದ ದೂರವಿರಿ.” [ಅಲ್‌ಹಶ್ರ್ 7]

ಫಿತ್ರ್ ಝಕಾತ್ ನೀಡುವುದು ಮುಸಲ್ಮಾನರಾದ ಹಿರಿಯರು, ಕಿರಿಯರು, ಗಂಡಸರು, ಹೆಂಗಸರು, ಸ್ವತಂತ್ರರು ಮತ್ತು ಗುಲಾಮರ ಮೇಲೆ ಕಡ್ಡಾಯವಾಗಿದೆ.

ಅಬ್ದುಲ್ಲಾಹ್ ಇಬ್ನ್ ಉಮರ್(ರ) ಹೇಳುತ್ತಾರೆ:

فَرَضَ رَسُولُ اللَّهِ صَلَّى اللَّهُ عَلَيْهِ وَسَلَّمَ زَكَاةَ الْفِطْرِ صَاعًا مِنْ تَمْرٍ أَوْ صَاعًا مِنْ شَعِيرٍ عَلَى الْعَبْدِ وَالْحُرِّ وَالذَّكَرِ وَالأُنْثَى وَالصَّغِيرِ وَالْكَبِيرِ مِنَ الْمُسْلِمِينَ.

“ಪ್ರವಾದಿ(ﷺ) ರವರು ಒಂದು ಸಾಅ್ ಖರ್ಜೂರ, ಅಥವಾ ಒಂದು ಸಾಅ್ ಬಾರ್ಲಿ ಫಿತ್ರ್ ಝಕಾತನ್ನು ಮುಸಲ್ಮಾನರಾದ ಗುಲಾಮರು, ಸ್ವತಂತ್ರರು, ಗಂಡಸರು, ಹೆಂಗಸರು, ಹಿರಿಯರು ಮತ್ತು ಕಿರಿಯರ ಮೇಲೆ ಕಡ್ಡಾಯಗೊಳಿಸಿದ್ದಾರೆ.” (ಅಲ್‌ಬುಖಾರಿ ಮತ್ತು ಮುಸ್ಲಿಮ್)

ಗರ್ಭದಲ್ಲಿರುವ ಶಿಶುವಿನ ಮೇಲೆ ಫಿತ್ರ್ ಝಕಾತ್ ಕಡ್ಡಾಯವಿಲ್ಲ. ಆದರೆ ಅದರ ಪರವಾಗಿ ಕೊಟ್ಟರೆ ಅದರಲ್ಲಿ ತೊಂದರೆಯಿಲ್ಲ. ಅಮೀರುಲ್ ಮುಅ್ಮಿನೀನ್ ಉಸ್ಮಾನ್(ರ) ಗರ್ಭದಲ್ಲಿರುವ ಶಿಶುವಿನ ಪರವಾಗಿ ಫಿತ್ರ್ ಝಕಾತ್ ಕೊಡುತ್ತಿದ್ದರು.

ಫಿತ್ರ್ ಝಕಾತನ್ನು ಸ್ವತಃ ತನ್ನ ಪರವಾಗಿ ಕೊಡುವುದು ಕಡ್ಡಾಯ-ವಾಗಿದೆ. ಅದೇ ರೀತಿ ಪತ್ನಿ, ಕುಟುಂಬಿಕರು ಮುಂತಾದ ತಾನು ಖರ್ಚು ಮಾಡುವುದು ಕಡ್ಡಾಯವಾಗಿರುವವರ ಪರವಾಗಿಯೂ ಕೊಡಬೇಕು. ಆದರೆ ಅವರಿಗೆ ಅವರ ಪರವಾಗಿ ಕೊಡುವ ಸಾಮರ್ಥ್ಯವಿಲ್ಲದಿದ್ದರೆ ಮಾತ್ರ. ಸಾಮರ್ಥ್ಯವಿದ್ದರೆ ಅವರ ಪರವಾಗಿ ಅವರೇ ಕೊಡವುದು ಅತ್ಯಂತ ಶ್ರೇಷ್ಠವಾಗಿದೆ. ಕಾರಣ, ಹದೀಸಿನಲ್ಲಿ ಅವರನ್ನೂ ಹೆಸರೆತ್ತಿ ಅಭಿಸಂಬೋಧಿಸಲಾಗಿದೆ.

ಈದ್‌ನ ದಿನರಾತ್ರಿ ತನಗೂ ತನ್ನ ಕುಟುಂಬಕ್ಕೂ ಸಾಕಾಗುವಷ್ಟು ಆಹಾರವಿಲ್ಲದವರು ಫಿತ್ರ್ ಝಕಾತ್ ಕೊಡುವುದು ಕಡ್ಡಾಯವಿಲ್ಲ. ಸಾಕಾಗುವುದಕ್ಕಿಂತ ಒಂದೇ ಒಂದು ಸಾಅ್ ಹೆಚ್ಚಿಗೆಯಿದ್ದರೂ ಫಿತ್ರ್ ಝಕಾತ್ ಕೊಡಬೇಕು. ಕಾರಣ ಅಲ್ಲಾಹು(ﷻ) ಹೇಳುತ್ತಾನೆ:

﴿فَٱتَّقُواْ ٱللَّهَ مَا ٱسۡتَطَعۡتُمۡ﴾

“ನಿಮಗೆ ಸಾಧ್ಯವಾಗುವಷ್ಟು ನೀವು ಅಲ್ಲಾಹನನ್ನು ಭಯಪಡಿರಿ.” (ಅತ್ತಗಾಬುನ್ 16)

ಪ್ರವಾದಿ(ﷺ) ರವರು ಹೇಳುತ್ತಾರೆ:

«إِذَا أَمَرْتُكُمْ بِأَمْرٍ فَأْتُوا مِنْهُ مَا اسْتَطَعْتُمْ».

“ನಾನು ನಿಮಗೆ ಏನಾದರೂ ಆಜ್ಞಾಪಿಸಿದರೆ ನಿಮಗೆ ಸಾಧ್ಯವಾದಷ್ಟು ಅದನ್ನು ನಿರ್ವಹಿಸಲು ಪ್ರಯತ್ನಿಸಿರಿ.” (ಅಲ್‌ಬುಖಾರಿ ಮತ್ತು ಮುಸ್ಲಿಮ್)

## ಫಿತ್ರ್ ಝಕಾತ್‌ನ ಯುಕ್ತಿ:

ಫಿತ್ರ್ ಝಕಾತ್‌ನ ಯುಕ್ತಿಯು ಅತ್ಯಂತ ಸ್ಪಷ್ಟವಾಗಿದೆ. ಅದು ಬಡವರಿಗೆ ಸಹಾಯ ಮಾಡುವುದು, ಈದ್ ದಿನಗಳಲ್ಲಿ ಬಡವರು ಭಿಕ್ಷೆ ಬೇಡದಂತೆ ತಡೆಗಟ್ಟುವುದು. ಅದೇ ರೀತಿ ಬಡವರು ಕೂಡ ಈದ್‌ನ ಸಂತೋಷ ಮತ್ತು ಸಂಭ್ರಮದಲ್ಲಿ ಶ್ರೀಮಂತರೊಂದಿಗೆ ಭಾಗಿಯಾಗಿ ಎಲ್ಲರೂ ಜೊತೆಯಾಗಿ ಹಬ್ಬವನ್ನು ಆಚರಿಸುವಂತಾಗುವುದು. ಔದಾರ್ಯದ ಗುಣ ಮತ್ತು ಸಾಂತ್ವನದ ಪ್ರೇಮವೂ ಫಿತ್ರ್ ಝಕಾತ್‌ನಲ್ಲಿ ಅಭಿವ್ಯಕ್ತವಾಗುತ್ತದೆ. ಮಾತ್ರವಲ್ಲ, ಉಪವಾಸದಲ್ಲಿ ಉಂಟಾದ ಕೊರತೆ, ಅನಗತ್ಯ ಮಾತು ಮತ್ತು ಪಾಪಗಳನ್ನು ಸಹ ಫಿತ್ರ್ ಝಕಾತ್ ಶುದ್ಧೀಕರಿಸುತ್ತದೆ. ರಮದಾನ್ ತಿಂಗಳಲ್ಲಿ ಪೂರ್ಣವಾಗಿ ಉಪವಾಸ ಆಚರಿಸಲು, ರಾತ್ರಿ ನಮಾಝ್ ನಿರ್ವಹಿಸಲು, ಸತ್ಕರ್ಮಗಳನ್ನು ನಿರ್ವಹಿಸಲು ಸುಲಭಗೊಳಿಸಿದ್ದಕ್ಕಾಗಿ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸುವುದು ಕೂಡ ಫಿತ್ರ್ ಝಕಾತ್‌ನ ಒಂದು ಭಾಗವಾಗಿದೆ.

ಇಬ್ನ್ ಅಬ್ಬಾಸ್(ﷺ) ರವರು ಹೇಳುತ್ತಾರೆ:

فَرَضَ رَسُولُ اللَّهِ صَلَّى اللَّهُ عَلَيْهِ وَسَلَّمَ زَكَاةَ الْفِطْرِ طُهْرَةً لِلصَّائِمِ مِنَ اللَّغْوِ وَالرَّفَثِ وَطُعْمَةً لِلْمَسَاكِينِ. مَنْ أَدَّاهَا قَبْلَ الصَّلَاةِ فَهِيَ زَكَاةٌ مَقْبُولَةٌ. وَمَنْ أَدَّاهَا بَعْدَ الصَّلَاةِ فَهِيَ صَدَقَةٌ مِنَ الصَّدَقَاتِ.

“ಉಪವಾಸಿಗನಿಂದ ಉಂಟಾದ ಅಸಭ್ಯ ಮತ್ತು ಅಶ್ಲೀಲ ಮಾತುಗಳನ್ನು ಶುದ್ಧೀಕರಿಸುವುದಕ್ಕಾಗಿ ಮತ್ತು ಬಡವರಿಗೆ ಆಹಾರವಾಗಿ ಅಲ್ಲಾಹನ ಸಂದೇಶವಾಹಕರು(ﷺ) ಫಿತ್ರ್ ಝಕಾತನ್ನು ಕಡ್ಡಾಯಗೊಳಿಸಿದರು. ಅದನ್ನು ಈದ್ ನಮಾಝ್‌ಗೆ ಮುಂಚೆ ನೀಡಿದರೆ ಅದು ಸ್ವೀಕೃತ ಝಕಾತ್ ಆಗುತ್ತದೆ. ಅದನ್ನು ಈದ್ ನಮಾಝ್‌ನ ನಂತರ ನೀಡಿದರೆ ಅದು ಕೇವಲ ಒಂದು ದಾನ ಮಾತ್ರವಾಗುತ್ತದೆ.” (ಅಬೂದಾವೂದ್ ಮತ್ತು ಇಬ್ನ್ ಮಾಜ)

## ಫಿತ್ರ್ ಝಕಾತ್ ಕೊಡಬೇಕಾದ ಆಹಾರ ಯಾವುದು?

ಫಿತ್ರ್ ಝಕಾತ್ ಕೊಡಬೇಕಾದ ಆಹಾರವು ಖರ್ಜೂರ, ಧಾನ್ಯ, ಅಕ್ಕಿ, ಒಣದ್ರಾಕ್ಷಿ, ಬೆಣ್ಣೆ ಮುಂತಾದ ಮನುಷ್ಯರು ತಿನ್ನುವ ಆಹಾರವಾಗಿರಬೇಕು.

ಇಬ್ನ್ ಉಮರ್(ﷺ) ರವರು ಹೇಳುತ್ತಾರೆ:

فَرَضَ رَسُولُ اللَّهِ صَلَّى اللَّهُ عَلَيْهِ وَسَلَّمَ زَكَاةَ الْفِطْرِ صَاعًا مِنْ تَمْرٍ أَوْ صَاعًا مِنْ شَعِيرٍ.

“ಪ್ರವಾದಿ(ﷺ) ರವರು ಒಂದು ಸಾಅ್ ಖರ್ಜೂರ, ಅಥವಾ ಒಂದು ಸಾಅ್ ಬಾರ್ಲಿ ಫಿತ್ರ್ ಝಕಾತನ್ನು ಕಡ್ಡಾಯಗೊಳಿಸಿದ್ದಾರೆ.” (ಅಲ್‌ಬುಖಾರಿ ಮತ್ತು ಮುಸ್ಲಿಮ್)

ಆ ಕಾಲದಲ್ಲಿ ಬಾರ್ಲಿ ಅವರ ಆಹಾರವಾಗಿತ್ತು. ಅಬೂ ಸಈದ್ ಅಲ್‌ಖುದ್ರೀ(ﷺ) ಹೇಳುತ್ತಾರೆ:

كُنَّا نُخْرِجُ فِي عَهْدِ رَسُولِ اللَّهِ صَلَّى اللَّهُ عَلَيْهِ وَسَلَّمَ يَوْمَ الْفِطْرِ صَاعًا مِنْ طَعَامٍ. وَكَانَ طَعَامَنَا الشَّعِيرُ وَالزَّبِيبُ وَالْأَقِطُ وَالتَّمْرُ.

“ಪ್ರವಾದಿ(ﷺ) ರವರ ಕಾಲದಲ್ಲಿ ನಾವು ಈದುಲ್ ಫಿತ್ರ್‌ನ ದಿನ ಒಂದು ಸಾಅ್ ಆಹಾರ ಕೊಡುತ್ತಿದ್ದೆವು. ನಮ್ಮ ಆಹಾರವು ಬಾರ್ಲಿ, ಒಣದ್ರಾಕ್ಷಿ, ಬೆಣ್ಣೆ ಮತ್ತು ಖರ್ಜೂರಗಳಾಗಿದ್ದವು.” (ಅಲ್‌ಬುಖಾರಿ)

## ಆಹಾರವಲ್ಲದ ಬೇರೇನಾದರೂ ಕೊಡಬಹುದೇ?

ಪಶು ಆಹಾರವನ್ನು ಕೊಟ್ಟರೆ ಸಿಂಧುವಾಗುವುದಿಲ್ಲ. ಕಾರಣ,

ಪ್ರವಾದಿ(ﷺ) ರವರು ಕಡ್ಡಾಯ ಮಾಡಿದ್ದು ಮನುಷ್ಯರ ಆಹಾರವಾಗಿದೆಯೇ ಹೊರತು ಪಶುಗಳ ಆಹಾರವಲ್ಲ.

ಅದೇ ರೀತಿ ಮನುಷ್ಯರ ಆಹಾರವನ್ನು ಬಿಟ್ಟು ಬಟ್ಟೆ, ಚಾಪೆ, ಪಾತ್ರೆ ಮತ್ತಿತರ ಪರಿಕರಗಳನ್ನು ಕೊಟ್ಟರೂ ಸಿಂಧುವಾಗದು. ಕಾರಣ, ಪ್ರವಾದಿ(ﷺ) ರವರು ಕಡ್ಡಾಯ ಮಾಡಿದ್ದು ಆಹಾರವನ್ನಾಗಿದೆ. ಆದುದರಿಂದ ಪ್ರವಾದಿ(ﷺ) ರನ್ನು ನಿಗದಿಗೊಳಿಸಿದ ವಸ್ತುವನ್ನಲ್ಲದೆ ಇನ್ನೇನನ್ನೂ ಕೊಡಬಾರದು.

## ಆಹಾರದ ಬದಲು ಹಣ ಕೊಡಬಹುದೇ?

ಆಹಾರದ ಬದಲು ಅದರ ಮೌಲ್ಯವನ್ನು ಕೊಟ್ಟರೂ ಸಿಂಧುವಾಗದು. ಕಾರಣ, ಅದು ಅಲ್ಲಾಹನ ಸಂದೇಶವಾಹಕರು(ﷺ) ಆಜ್ಞಾಪಿಸಿದ ಆಜ್ಞೆಗೆ ವಿರುದ್ಧವಾಗಿದೆ. ಪ್ರವಾದಿ(ﷺ) ರವರು ಹೇಳಿದರು:

«مَنْ عَمِلَ عَمَلًا لَيْسَ عَلَيْهِ أَمْرُنَا فَهُوَ رَدٌّ».

"ನಮ್ಮ ಆಜ್ಞೆಯಿಲ್ಲದ ಒಂದು ಕರ್ಮವನ್ನು ಯಾರಾದರೂ ನಿರ್ವಹಿಸಿದರೆ ಅದು ತಿರಸ್ಕೃತವಾಗಿದೆ."

ಇನ್ನೊಂದು ವರದಿಯಲ್ಲಿ:

«مَنْ أَحْدَثَ فِي أَمْرِنَا هَذَا مَا لَيْسَ مِنْهُ فَهُوَ رَدٌّ».

"ನಮ್ಮ ಈ ಧರ್ಮದಲ್ಲಿಲ್ಲದ ಒಂದು ಹೊಸ ಕರ್ಮವನ್ನು ಯಾರಾದರೂ ನಿರ್ವಹಿಸಿದರೆ ಅದು ತಿರಸ್ಕೃತವಾಗಿದೆ." (ಮುಸ್ಲಿಂ. ಇದರ ಮೂಲ ಅಲ್‌ಬುಖಾರಿ ಮತ್ತು ಮುಸ್ಲಿಮ್‌ನಲ್ಲಿದೆ)

ಮೌಲ್ಯವನ್ನು ಕೊಡುವುದು ಸಹಾಬಾಗಳ ಪ್ರವೃತ್ತಿಗೂ ವಿರುದ್ಧವಾಗಿದೆ. ಕಾರಣ, ಅವರು ಕೂಡ ಒಂದು ಸಾಅ್ ಆಹಾರವನ್ನೇ ಕೊಡುತ್ತಿದ್ದರು. ಹಣವನ್ನು ಕೊಡುತ್ತಿರಲಿಲ್ಲ.

ಪ್ರವಾದಿ(ﷺ) ರವರು ಹೇಳಿದರು:

«عَلَيْكُمْ بِسُنَّتِي وَسُنَّةِ الْخُلَفَاءِ الرَّاشِدِينَ الْمَهْدِيِّينَ مِنْ بَعْدِي».

"ನೀವು ನನ್ನ ಸುನ್ನತ್ತನ್ನು ಮತ್ತು ನನ್ನ ನಂತರ ಬರುವ ಸನ್ಮಾರ್ಗಿಗಳಾದ ಅಲ್‌ಖುಲಫಾಉ ರ್‍ರಾಶಿದ್‌ಗಳ ಸುನ್ನತ್ತನ್ನು ಬಿಗಿಯಾಗಿ ಹಿಡಿಯಿರಿ." (ಅಹ್ಮದ್, ಅಬೂದಾವೂದ್, ಇಬ್ನ್ ಮಾಜ ಮತ್ತು ಅತ್ತಿರ್ಮುದಿ)

ಕಾರಣ ಫಿತ್ರ್ ಝಕಾತ್ ಎನ್ನುವುದು ಒಂದು ನಿರ್ದಿಷ್ಟ ವಿಧದ ಆಹಾರವನ್ನು ಕೊಡುವ ಮೂಲಕ ಅಲ್ಲಾಹನಿಗೆ ಮಾಡುವ ಆರಾಧನೆಯಾಗಿದೆ. ಫಿತ್ರ್ ಝಕಾತ್ ಕೊಡಬೇಕಾದ ಆ ಸಮಯವಲ್ಲದೆ ಬೇರೆ ಸಮಯದಲ್ಲಿ ಕೊಟ್ಟರೆ ಅದು ಸಿಂಧುವಾಗದಂತೆ ಆ ವಿಧವಲ್ಲದೆ ಬೇರೆ ವಿಧವನ್ನು ಕೊಟ್ಟರೂ ಅದು ಸಿಂಧುವಾಗುವುದಿಲ್ಲ. ಕಾರಣ, ಪ್ರವಾದಿ(ﷺ) ರವರು ಫಿತ್ರ್ ಝಕಾತನ್ನು ಅನೇಕ ವಿಧದ ಆಹಾರಗಳಿಂದ ನಿಶ್ಚಯಿಸಿದ್ದಾರೆ. ಸರ್ವಸಾಮಾನ್ಯವಾಗಿ ಅವುಗಳ ಮೌಲ್ಯವೂ ಬೇರೆ ಬೇರೆಯಾಗಿದೆ.

ಫಿತ್ರ್ ಝಕಾತ್‌ನ ಬದಲು ಅದರ ಮೌಲ್ಯವನ್ನು ಕೊಟ್ಟರೆ ಅದು ಫಿತ್ರ್ ಝಕಾತ್ ಎಂಬ ಇಸ್ಲಾಮಿನ ಬಹಿರಂಗ ಲಾಂಛನವನ್ನು ಗುಪ್ತವಾಗಿ ಕೊಡುವ ದಾನವಾಗಿ ಪರಿವರ್ತಿಸುತ್ತದೆ. ಒಂದು ಸಾಅ್ ಆಹಾರವನ್ನು ಕೊಟ್ಟರೆ ಅದು ಮುಸಲ್ಮಾನರ ನಡುವೆ ಬಹಿರಂಗವಾಗುತ್ತದೆ, ಮಕ್ಕಳಿಗೆ ಅದರ ಬಗ್ಗೆ ಅರಿವು ಸಿಗುತ್ತದೆ, ಅದನ್ನು ಅಳೆಯುವುದು, ಹಂಚುವುದು ಮುಂತಾದವುಗಳನ್ನು ಅವರು ನೇರವಾಗಿ ಕಾಣುತ್ತಾರೆ. ಆದರೆ ಅದರ ಬದಲಾಗಿ ದಿರ್ಹಮ್‌ಗಳನ್ನು ಕೊಟ್ಟರೆ ಅದು ಕೊಡುವವನ ಮತ್ತು ತೆಗೆದುಕೊಳ್ಳುವವನ ಮಧ್ಯೆ ಗುಪ್ತವಾಗಿರುತ್ತದೆ.

## ಫಿತ್ರ್ ಝಕಾತ್ ಎಷ್ಟು ಕೊಡಬೇಕು?

ಫಿತ್ರ್ ಝಕಾತ್‌ನ ಪ್ರಮಾಣವು ಪ್ರವಾದಿ(ﷺ) ರವರ ಕಾಲದ ಸಾಅ್‌ನ ಪ್ರಕಾರ ಒಂದು ಸಾಅ್. ಅಂದರೆ ಮಿಸ್ಕಾಲ್‌ಗಳ ಪ್ರಕಾರ 480 ಮಿಸ್ಕಾಲ್ ಉತ್ತಮ ಜಾತಿಯ ಧಾನ್ಯ. ಒಂದು ಮಿಸ್ಕಾಲ್ ಎಂದರೆ 4¼ ಗ್ರಾಂ. 480 ಮಿಸ್ಕಾಲ್‌ಗಳು 2.04 ಕಿಲೋಗ್ರಾಂ ಆಗುತ್ತದೆ. ಪ್ರವಾದಿಯವರ ಸಾಅ್‌ನ ಪ್ರಮಾಣವನ್ನು ಅರಿಯಬೇಕಾದರೆ 2.04 ಕಿಲೋಗ್ರಾಂ ಧಾನ್ಯವನ್ನು ಅಳೆದು ಅದನ್ನು ಒಂದು ಪಾತ್ರೆಯಲ್ಲಿ ಹಾಕಿ ಅದರ ಪ್ರಮಾಣದಷ್ಟು ಅಳೆದು ನೀಡಬೇಕು.

## ಫಿತ್ರ್ ಝಕಾತ್ ಯಾವಾಗ ಕೊಡಬೇಕು?

ಫಿತ್ರ್ ಝಕಾತ್ ಕೊಡುವ ಸಮಯ ಈದ್‌ನ ಹಿಂದಿನ ದಿನ ಸೂರ್ಯಾಸ್ತದ ಬಳಿಕ. ಆ ಸಮಯದಲ್ಲಿ ಯಾರ ಮೇಲೆ ಫಿತ್ರ್ ಝಕಾತ್ ಕಡ್ಡಾಯವಾಗಿದೆಯೋ ಅವರು ಫಿತ್ರ್ ಝಕಾತ್

ಕೊಡಬೇಕು. ಇದರ ಪ್ರಕಾರ ಸೂರ್ಯಾಸ್ತಕ್ಕೆ ಮುಂಚೆ ಮರಣಹೊಂದಿದವರ ಮೇಲೆ ಅದು ಕೆಲವು ಕ್ಷಣಗಳ ಮುಂಚೆಯಾದರೂ ಸರಿ ಫಿತ್ರ್ ಝಕಾತ್ ಕಡ್ಡಾಯವಿಲ್ಲ. ಆದರೆ ಸೂರ್ಯಾಸ್ತದ ಬಳಿಕ ಮರಣಹೊಂದಿದವರ ಮೇಲೆ ಅದು ಕೆಲವು ಕ್ಷಣಗಳ ನಂತರವಾದರೂ ಸರಿ ಫಿತ್ರ್ ಝಕಾತ್ ಕಡ್ಡಾಯವಿದೆ. ಸೂರ್ಯಾಸ್ತಕ್ಕೆ ಮುಂಚೆ ಒಂದು ಮಗು ಹುಟ್ಟಿದರೆ ಅದು ಕೆಲವು ಕ್ಷಣಗಳ ಮುಂಚೆಯಾದರೂ ಸರಿ ಫಿತ್ರ್ ಝಕಾತ್ ಕಡ್ಡಾಯವಿಲ್ಲ. ಆದರೆ ಈಗಾಗಲೇ ಹೇಳಿದಂತೆ ಫಿತ್ರ್ ಝಕಾತ್ ಕೊಟ್ಟರೆ ಅದರಲ್ಲಿ ತೊಂದರೆಯಿಲ್ಲ. ಆದರೆ ಸೂರ್ಯಾಸ್ತದ ಬಳಿಕ ಹುಟ್ಟಿದರೆ ಅದು ಕೆಲವು ಕ್ಷಣಗಳ ನಂತರವಾದರೂ ಸರಿ ಫಿತ್ರ್ ಝಕಾತ್ ಕಡ್ಡಾಯ.

ಫಿತ್ರ್ ಝಕಾತ್ ಕಡ್ಡಾಯವಾಗುವುದು ಈದ್‌ನ ಹಿಂದಿನ ದಿನ ಸೂರ್ಯಾಸ್ತದ ಬಳಿಕ. ಕಾರಣ, ಅದು ರಮದಾನ್ ತಿಂಗಳಿನಿಂದ ಬೇರ್ಪಡುವ ಸಮಯವಾಗಿದೆ.

ಫಿತ್ರ್ ಝಕಾತ್ ಕೊಡುಲು ಎರಡು ಸಮಯಗಳಿವೆ: ಶ್ರೇಷ್ಠವಾದ ಸಮಯ ಮತ್ತು ಅನುಮತಿಯಿರುವ ಸಮಯ. ಫಿತ್ರ್ ಝಕಾತ್ ಕೊಡುವ ಶ್ರೇಷ್ಠವಾದ ಸಮಯವು ಈದ್ ದಿನ ಬೆಳಗ್ಗೆ ಈದ್ ನಮಾಝ್ ಮಾಡುವುದಕ್ಕೆ ಮುಂಚೆ.

ಅಬೂ ಸಈದ್ ಅಲ್‌ಖುದ್ರೀ(ﷺ) ಹೇಳುತ್ತಾರೆ:

كُنَّـــا نُخْرِجُ فِي عَهْدِ رَسُـــولِ اللَّهِ صَلَّـــى اللَّهُ عَلَيْهِ وَسَـــلَّمَ يَوْمَ الْفِطْرِ صَاعًـــا مِنْ طَعَامٍ.

"ಪ್ರವಾದಿ(ﷺ) ರವರ ಕಾಲದಲ್ಲಿ ನಾವು ಈದುಲ್ ಫಿತ್ರ್‌ನ ದಿನ ಒಂದು ಸಾಅ್ ಆಹಾರ ಕೊಡುತ್ತಿದ್ದೆವು." (ಅಲ್‌ಬುಖಾರಿ)

ಇಬ್ನ್ ಉಮರ್(ﷺ) ರವರು ಹೇಳುತ್ತಾರೆ:

أَنَّ رَسُـــولَ اللَّهِ صَلَّى اللَّهُ عَلَيْهِ وَسَـــلَّمَ أَمَرَ بِزَكَاةِ الْفِطْرِ أَنْ تُـــؤَدَّى قَبْلَ خُرُوجِ النَّـــاسِ إِلَى الصَّلاَةِ.

"ಜನರು ಈದ್ ನಮಾಝ್‌ಗೆ ಹೊರಡುವುದಕ್ಕೆ ಮುಂಚೆ ಫಿತ್ರ್ ಝಕಾತ್ ಕೊಟ್ಟುಬಿಡಲು ಪ್ರವಾದಿ(ﷺ) ರವರು ಆಜ್ಞಾಪಿಸಿದ್ದಾರೆ." (ಅಲ್‌ಬುಖಾರಿ, ಮುಸ್ಲಿಂ ಹಾಗೂ ಮತ್ತಿತರರು)

ಈ ಕಾರಣದಿಂದಲೇ ಫಿತ್ರ್ ಝಕಾತ್ ಕೊಡಲು ಸುಗಮವಾಗುವುದಕ್ಕಾಗಿ ಈದುಲ್ ಫಿತ್ರ್ ನಮಾಝನ್ನು ಸ್ವಲ್ಪ ತಡಮಾಡುವುದು ಶ್ರೇಷ್ಠವಾಗಿದೆ.

ಫಿತ್ರ್ ಝಕಾತ್ ಕೊಡಲು ಅನುಮತಿಯಿರುವ ಸಮಯವು ಈದ್ ದಿನಕ್ಕಿಂತ ಒಂದು ಅಥವಾ ಎರಡು ದಿನ ಮಂಚೆಯಾಗಿದೆ.

ನಾಫಿಅ್(ﷺ) ಹೇಳುತ್ತಾರೆ:

كَانَ ابْـــنُ عُمَرَ يُعْطِـــي عَنْ الصَّغِيـــرِ وَالْكَبِيرِ حَتَّى إِنْ كَانَ لِيُعْطِـــي عَـــنْ بَنِـــيَّ. وَكَانَ يُعْطِيهَـــا الَّذِينَ يَقْبَلُونَهَـــا. وَكَانُـــوا يُعْطُـــونَ قَبْـــلَ الْفِطْـــرِ بِيَوْمٍ أَوْ يَوْمَيْنِ.

"ಇಬ್ನ್ ಉಮರ್(ﷺ) ರವರು ಕಿರಿಯರು ಮತ್ತು ಹಿರಿಯರ ಪರವಾಗಿ ಫಿತ್ರ್ ಝಕಾತ್ ನೀಡುತ್ತಿದ್ದರು. ಎಲ್ಲಿಯವರೆಗೆಂದರೆ ನನ್ನ ಮಕ್ಕಳ ಪರವಾಗಿಯೂ ಅವರು ನೀಡುತ್ತಿದ್ದರು. ಅವುಗಳನ್ನು ಸ್ವೀಕರಿಸುವ ಜನರಿಗೆ ಅವರು ಅದನ್ನು ನೀಡುತ್ತಿದ್ದರು. ಅವರಿಗೆ ಅದನ್ನು ಈದ್ ದಿನಕ್ಕಿಂದ ಒಂದು ಅಥವಾ ಎರಡು ದಿನ ಮುಂಚೆ ನೀಡಲಾಗುತ್ತಿತ್ತು." (ಅಲ್‌ಬುಖಾರಿ)

ಆದರೆ ಈದ್ ನಮಾಝ್‌ನ ತನಕ ಅದನ್ನು ತಡಮಾಡಬಾರದು. ಯಾವುದೇ ವಿನಾಯಿತಿಯಿಲ್ಲದೆ ಈದ್ ನಮಾಝ್‌ನ ತನಕ ತಡಮಾಡಿದರೆ ಅದು ಸ್ವೀಕಾರಾರ್ಹವಲ್ಲ. ಕಾರಣ, ಅದು ಅಲ್ಲಾಹನ ಸಂದೇಶವಾಹಕರು(ﷺ) ಆಜ್ಞಾಪಿಸಿದ ಆಜ್ಞೆಗೆ ವಿರುದ್ಧವಾಗಿದೆ. ಈಗಾಗಲೇ ಉಲ್ಲೇಖಿಸಿದಂತೆ ಇಬ್ನ್ ಅಬ್ಬಾಸ್(ﷺ) ರವರು ಹೇಳುತ್ತಾರೆ:

مَنْ أَدَّاهَـــا قَبْلَ الصَّـــلاَةِ فَهِـــيَ زَكَاةٌ مَقْبُولَةٌ. وَمَنْ أَدَّاهَا بَعْـــدَ الصَّلاَةِ فَهِـــيَ صَدَقَةٌ مِـــنَ الصَّدَقَاتِ.

"ಅದನ್ನು ಈದ್ ನಮಾಝ್‌ಗೆ ಮುಂಚೆ ನೀಡಿದರೆ ಅದು ಸ್ವೀಕೃತ ಝಕಾತ್ ಆಗುತ್ತದೆ. ಅದನ್ನು ಈದ್ ನಮಾಝ್‌ನ ನಂತರ ನೀಡಿದರೆ ಅದು ಕೇವಲ ಒಂದು ದಾನ ಮಾತ್ರವಾಗುತ್ತದೆ."

ಆದರೆ ವಿನಾಯಿತಿಯಿಂದಾಗಿ ಅದನ್ನು ತಡಮಾಡಿದರೆ ಅದರಲ್ಲಿ ತೊಂದರೆಯಿಲ್ಲ. ಉದಾಹರಣೆಗೆ, ಫಿತ್ರ್ ಝಕಾತ್ ಆಗಿ ನೀಡಲು ತನ್ನ ಬಳಿ ಏನೂ ಇಲ್ಲದ ಅಥವಾ ಅದನ್ನು ಸ್ವೀಕರಿಸಿಕೊಳ್ಳಲು ಯಾರೂ ಇಲ್ಲದ ಸ್ಥಳದಲ್ಲಿರುವಾಗ ಈದ್ ದಿನ ಬಂದರೆ, ಅಥವಾ ಈದ್ ದಿನವೆಂದು ಅನಿರೀಕ್ಷಿತವಾಗಿ ಘೋಷಣೆಯಾಗಿ ನಮಾಝ್‌ಗೆ ಮುಂಚೆ ಫಿತ್ರ್ ಝಕಾತ್ ನೀಡಲು ಸಾಧ್ಯವಾಗದಿದ್ದರೆ, ಅಥವಾ ತನ್ನ ಪರವಾಗಿ ಫಿತ್ರ್ ಝಕಾತ್ ನೀಡಲು ಬೇರೊಬ್ಬ ವ್ಯಕ್ತಿಯನ್ನು ಅವಲಂಬಿಸಿ ಆತ ಅದನ್ನು ಕೊಡಲು ಮರೆತುಬಿಟ್ಟರೆ ಇತ್ಯಾದಿ ಸಂದರ್ಭಗಳಲ್ಲಿ ಈದ್ ದಿನದ ಬಳಿಕ ಫಿತ್ರ್ ಝಕಾತ್ ನೀಡಿದರೂ ಅದರಲ್ಲಿ ತೊಂದರೆಯಿಲ್ಲ. ಕಾರಣ, ಇಂತಹವರಿಗೆ ಅದರಲ್ಲಿ ವಿನಾಯಿತಿಯಿದೆ.

## ಫಿತ್ರ್ ಝಕಾತ್ ಹೇಗೆ ಮತ್ತು ಯಾರಿಗೆ ಕೊಡಬೇಕು?

ಈದ್ ನಮಾಝ್‌ಗೆ ಮುಂಚಿತವಾಗಿ ಫಿತ್ರ್ ಝಕಾತ್‌ನ ಅರ್ಹ ಫಲಾನುಭವಿಗಳ ಬಳಿಗೆ ತೆರಳಿ ಅವರಿಗೆ ಕೊಡುವುದು ಅಥವಾ ಅವರ ಪರವಾಗಿ ಸ್ವೀಕರಿಸಲು ನಿಶ್ಚಯಿಸಲಾದ ವ್ಯಕ್ತಿಗೆ ಕೊಡುವುದು ಕಡ್ಡಾಯವಾಗಿದೆ. ಆದರೆ ಇಂತಿಂತಹ ವ್ಯಕ್ತಿಗೆ ಅಥವಾ ಅವನ ಪರವಾಗಿ ಸ್ವೀಕರಿಸಲು ನಿಶ್ಚಯಿಸಲಾದ ವ್ಯಕ್ತಿಗೆ ನೀಡುತ್ತೇನೆಂದು ನಿಯ್ಯತ್ ಮಾಡಿ ಆ ವ್ಯಕ್ತಿ ಸಿಗದಿದ್ದರೆ ಅದನ್ನು ಬೇರೊಬ್ಬ ಅರ್ಹ ಫಲಾನುಭವಿಗೆ ನೀಡಬೇಕು. ಮೊದಲನೆಯವನನ್ನು ಹುಡುಕುತ್ತಾ ತಡ ಮಾಡಬಾರದು.

ಫಿತ್ರ್ ಝಕಾತ್ ನೀಡುವ ಸ್ಥಳವು ತಾನು ಅದನ್ನು ನೀಡಬೇಕಾದ ಸಮಯದಲ್ಲಿ ಎಲ್ಲಿರುವೆನೋ ಅಲ್ಲಿಯ ಬಡವರಿಗೆ ನೀಡಬೇಕು. ಅದು ತನ್ನ ಊರಾಗಿದ್ದರೂ ಅಥವಾ ಬೇರೆ ಊರುಗಳಾಗಿದ್ದರೂ ಸರಿ. ವಿಶೇಷವಾಗಿ ಶ್ರೇಷ್ಠ ಸ್ಥಳಗಳಾದ ಮಕ್ಕಾ ಮತ್ತು ಮದೀನಾಗಳಲ್ಲಿದ್ದರೆ ಅಲ್ಲಿಯೇ ನೀಡಬೇಕು. ಅಥವಾ ಯಾವ ಸ್ಥಳದಲ್ಲಿರುವ ಬಡವರು ಫಿತ್ರ್ ಝಕಾತ್‌ಗೆ ಅತ್ಯಧಿಕ ಅರ್ಹರೋ ಅಲ್ಲಿ ನೀಡಬೇಕು. ತಾನಿರುವ ಊರಿನಲ್ಲಿ ಫಿತ್ರ್ ಝಕಾತ್ ಸ್ವೀಕರಿಸುವವರು ಇಲ್ಲದಿದ್ದಲ್ಲಿ, ಅಥವಾ ಅಲ್ಲಿ ಫಿತ್ರ್ ಝಕಾತ್ ಯಾರಿಗೆ ನೀಡಬೇಕೆಂದು ತನಗೆ ಗೊತ್ತಿಲ್ಲದಿದ್ದಲ್ಲಿ ಅರ್ಹ ಸ್ಥಳದಲ್ಲಿ ಅದನ್ನು ವಿತರಣೆ ಮಾಡಲು ನಿಶ್ಚಯಿಸಲಾದ ಸಂಸ್ಥೆಗೆ ಅದನ್ನು ಒಪ್ಪಿಸಬೇಕು.

ಫಿತ್ರ್ ಝಕಾತ್ ಸ್ವೀಕರಿಸಲು ಅರ್ಹರು ಬಡವರು. ಸಾಲವಿದ್ದು ಅದನ್ನು ಸಂದಾಯ ಮಾಡಲು ಒದ್ದಾಡುವವರಿಗೂ ಅವರಿಗೆ ಅವಶ್ಯವಿದ್ದಷ್ಟು ನೀಡಬಹುದು. ಫಿತ್ರ್ ಝಕಾತನ್ನು ಒಬ್ಬರಿಗಿಂತ ಹೆಚ್ಚು ಬಡವರಿಗೆ ನೀಡಬಹುದು. ಅಥವಾ ಒಂದು ದೊಡ್ಡ ಚೀಲ ಫಿತ್ರ್ ಝಕಾತನ್ನು ಒಬ್ಬನೇ ಬಡವನಿಗೂ ನೀಡಬಹುದು. ಕಾರಣ, ಪ್ರವಾದಿ(ﷺ) ರವರು ಕೊಡಬೇಕಾದ ಪ್ರಮಾಣವನ್ನು ನಿರ್ಣಯಿಸಿದ್ದಾರೆಯೇ ವಿನಾ ಯಾರಿಗೆ ಎಷ್ಟು ಕೊಡಬೇಕೆಂದು ನಿರ್ಣಯಿಸಿಲ್ಲ.

ಓ ಅಲ್ಲಾಹ್! ನೀನು ತೃಪ್ತಿಪಡುವ ವಿಧದಲ್ಲಿ ನಿನ್ನ ಆಜ್ಞೆಗಳನ್ನು ಪಾಲಿಸುವ ಸೌಭಾಗ್ಯವನ್ನು ನಮಗೆ ದಯಪಾಲಿಸು. ನಮ್ಮ ಶರೀರಗಳನ್ನು, ಸಂಪತ್ತನ್ನು, ಕರ್ಮಗಳನ್ನು ಸಂಸ್ಕರಿಸು. ಕೆಟ್ಟ ವಿಶ್ವಾಸ, ಮಾತು ಮತ್ತು ಕರ್ಮಗಳಿಂದ ನಮ್ಮನ್ನು ಶುದ್ಧೀಕರಿಸು. ನೀನು ಅತ್ಯುದಾರಿಯೂ ಗೌರವಾರ್ಹನೂ ಆಗಿರುವೆ. ನಮ್ಮ ಪ್ರವಾದಿ ಮುಹಮ್ಮದ್(ﷺ) ರವರ ಮೇಲೆ, ಅವರ ಕುಟುಂಬದ ಮೇಲೆ ಮತ್ತು ಅವರ ಸಹಾಬಾಗಳೆಲ್ಲರ ಮೇಲೆ ಅಲ್ಲಾಹನ ಸಲಾತ್ ಮತ್ತು ಸಲಾಂ ಇರಲಿ. ■

---

*14 ನೇ ಪುಟದಿಂದ*

## ನಿತ್ಯನೂತನ ದೈವಿಕಗ್ರಂಥ

ಹಾಗೂ ಜನರ ವಿಚಾರಧಾರೆ ಕುರ್‌ಆನಿನ ಮೇಲೆ ಪ್ರಭಾವ ಬೀರಿಲ್ಲ. ಇದನ್ನು ಕುರ್‌ಆನ್ ಅದರ ದೈವಿಕತೆಗೆ ಪುರಾವೆಯಾಗಿ ಮುಂದಿಡುವುದನ್ನು ನೋಡಿರಿ.

"ಇವರೇನು ಕುರ್‌ಆನಿನ ಬಗ್ಗೆ ಚಿಂತನೆ ನಡೆಸುವುದಿಲ್ಲವೇ? ಇದು ಅಲ್ಲಾಹನ ಹೊರತು ಇನ್ನಾರ ಕಡೆಯಿಂದಾದರೂ ಆಗಿರುತ್ತಿದ್ದರೆ ಇದರಲ್ಲಿ ಅನೇಕ ವಿರೋಧಾಭಾಸಗಳು ಕಂಡುಬರುತ್ತಿದ್ದವು." (4:82)

ಪವಿತ್ರ ಕುರ್‌ಆನ್ ಪ್ರಪಂಚದಲ್ಲಿ ಹರಡಿಕೊಂಡಿರುವ ದೃಷ್ಟಾಂತಗಳ ಕುರಿತು ಚಿಂತಿಸಿ ಅಲ್ಲಾಹನ ಏಕತ್ವವನ್ನು ಅಂಗೀಕರಿಸಿ ಅವನನ್ನು ಮಾತ್ರ ಆರಾಧಿಸಬೇಕೆಂದು ಕರೆ ನೀಡುತ್ತದೆ. ಅದನ್ನು ನಿರ್ಲಕ್ಷಿಸಿದರೆ ಬಂದೆರಗುವ ಅಪಾಯದ ಕುರಿತು ಕುರ್‌ಆನ್ ಮುನ್ನೆಚ್ಚರಿಕೆ ನೀಡುತ್ತದೆ.

"ನನ್ನ ಉದ್ಬೋಧದಿಂದ ವಿಮುಖನಾದವನ ಜೀವನವು ಭೂಲೋಕದಲ್ಲಿ ಸಂಕೀರ್ಣವಾಗುವುದು ಮತ್ತು ಪುನರುತ್ಥಾನದ ದಿನ ನಾವು ಅವನನ್ನು ಕುರುಡನನ್ನಾಗಿ ಮಾಡಿ ಎಬ್ಬಿಸುವೆವು." (20:124) ■

# ಉಪವಾಸದ ಕರ್ಮಶಾಸ್ತ್ರ

ಇಸ್ಲಾಮಿನ ಪಂಚಸ್ಥಂಭಗಳಲ್ಲೊಂದಾದ ಉಪವಾಸವು ಇಸ್ಲಾಮಿಕ್ ಶರೀಅತ್ತಿನ ಕಡ್ಡಾಯ ಆದೇಶಗಳಲ್ಲಿ ಒಳಪಟ್ಟಿದೆ.

ಅಲ್ಲಾಹನು ಹೇಳುತ್ತಾನೆ:

﴿ يَٰٓأَيُّهَا ٱلَّذِينَ ءَامَنُواْ كُتِبَ عَلَيۡكُمُ ٱلصِّيَامُ
كَمَا كُتِبَ عَلَى ٱلَّذِينَ مِن قَبۡلِكُمۡ لَعَلَّكُمۡ تَتَّقُونَ
١٨٣ أَيَّامٗا مَّعۡدُودَٰتٖۚ فَمَن كَانَ مِنكُم مَّرِيضًا
أَوۡ عَلَىٰ سَفَرٖ فَعِدَّةٞ مِّنۡ أَيَّامٍ أُخَرَۚ وَعَلَى ٱلَّذِينَ
يُطِيقُونَهُۥ فِدۡيَةٞ طَعَامُ مِسۡكِينٖۖ فَمَن تَطَوَّعَ خَيۡرٗا فَهُوَ
خَيۡرٞ لَّهُۥۚ وَأَن تَصُومُواْ خَيۡرٞ لَّكُمۡۖ إِن كُنتُمۡ تَعۡلَمُونَ
١٨٤ شَهۡرُ رَمَضَانَ ٱلَّذِيٓ أُنزِلَ فِيهِ ٱلۡقُرۡءَانُ
هُدٗى لِّلنَّاسِ وَبَيِّنَٰتٖ مِّنَ ٱلۡهُدَىٰ وَٱلۡفُرۡقَانِۚ
فَمَن شَهِدَ مِنكُمُ ٱلشَّهۡرَ فَلۡيَصُمۡهُۖ وَمَن كَانَ
مَرِيضًا أَوۡ عَلَىٰ سَفَرٖ فَعِدَّةٞ مِّنۡ أَيَّامٍ أُخَرَۗ
يُرِيدُ ٱللَّهُ بِكُمُ ٱلۡيُسۡرَ وَلَا يُرِيدُ بِكُمُ ٱلۡعُسۡرَ
وَلِتُكۡمِلُواْ ٱلۡعِدَّةَ وَلِتُكَبِّرُواْ ٱللَّهَ عَلَىٰ
مَا هَدَىٰكُمۡ وَلَعَلَّكُمۡ تَشۡكُرُونَ ١٨٥ ﴾

“ಸತ್ಯವಿಶ್ವಾಸಿಗಳೇ, ಗತ ಪ್ರವಾದಿಗಳ ಅನುಯಾಯಿಗಳಿಗೆ ಕಡ್ಡಾಯಗೊಳಿಸಿದಂತೆಯೇ ನಿಮ್ಮ ಮೇಲೂ ಉಪವಾಸ ವೃತವನ್ನು ಕಡ್ಡಾಯಗೊಳಿಸಲಾಗಿದೆ. ಇದರಿಂದ ನಿಮ್ಮಲ್ಲಿ ಧರ್ಮನಿಷ್ಠೆಯ ಗುಣವಿಶೇಷವುಂಟಾಗುವುದೆಂದು ಆಶಿಸಲಾಗಿದೆ. ಎಣಿಕೆಯ ಕೆಲವೇ ದಿನಗಳ ಉಪವಾಸ ವೃತವದು. ನೀವೆಲ್ಲಾದರೂ ರೋಗಿಯಾಗಿದ್ದರೆ ಅಥವಾ ಪ್ರಯಾಣದಲ್ಲಿದ್ದರೆ ಇತರ ದಿನಗಳಲ್ಲಿ ಅಷ್ಟೇ ಸಂಖ್ಯೆಯನ್ನು ಪೂರ್ತಿಗೊಳಿಸಿಕೊಳ್ಳಬೇಕು. ಉಪವಾಸವಿರಲು ಶಕ್ತರಾದವರು (ಉಪವಾಸವಿರದಿದ್ದರೆ) ಪ್ರಾಯಶ್ಚಿತ್ತವನ್ನು ಕೊಡಬೇಕು. ಒಂದು ದಿನದ ಉಪವಾಸದ ಪ್ರಾಯಶ್ಚಿತ್ತವು ಓರ್ವ ಬಡವನಿಗೆ ಆಹಾರ ನೀಡುವುದಾಗಿದೆ. ಮತ್ತು ತನ್ನ ಇಚ್ಛೆಯಿಂದ ಇನ್ನಷ್ಟು ಸತ್ಕಾರ್ಯ ಮಾಡಿದರೆ ಇದು ಅವನಿಗೆ ಇನ್ನೂ ಉತ್ತಮ. ಆದರೆ ನೀವು ಅರಿಯುವವರಾಗಿದ್ದರೆ ಉಪವಾಸವಿರುವುದೇ ನಿಮಗೆ ಅತ್ಯುತ್ತಮ. ಮಾನವರಿಗೆ ಸಾದ್ಯಂತ ಸನ್ಮಾರ್ಗ, ಮಾರ್ಗದರ್ಶನ ಮತ್ತು ಸತ್ಯಾಸತ್ಯಗಳಲ್ಲಿರುವ ಅಂತರವನ್ನು ಸುವ್ಯಕ್ತವಾಗಿ ತಿಳಿಸುವ ಶಿಕ್ಷಣಗಳನ್ನೊಳಗೊಂಡಿರುವ ಕುರ್‌ಆನ್ ಅವತೀರ್ಣಗೊಂಡಿರುವ ತಿಂಗಳು ರಮದಾನ್ ಆಗಿದೆ. ಆದುದರಿಂದ ಯಾವನಾದರೂ ಈ ತಿಂಗಳನ್ನು ಹೊಂದಿದಾಗ ಅವನು ಆ ಸಂಪೂರ್ಣ ತಿಂಗಳ ಉಪವಾಸ ವೃತವನ್ನಾಚರಿಸಬೇಕು. ಯಾವನಾದರೂ ರೋಗಿಯಾಗಿದ್ದರೆ ಅಥವಾ ಪ್ರಯಾಣಿಕನಾಗಿದ್ದರೆ ಆತನು ಇತರ ದಿನಗಳಲ್ಲಿ ಉಪವಾಸ ದಿನಗಳ ಸಂಖ್ಯೆಯನ್ನು ಪೂರ್ತಿಗೊಳಿಸಬೇಕು. ಅಲ್ಲಾಹನು ನಿಮಗೆ ಸೌಲಭ್ಯವನ್ನೀಯಲು ಬಯಸುತ್ತಾನೆ. ನಿಮ್ಮನ್ನು ಕಷ್ಟಕ್ಕೀಡುಮಾಡಲು ಇಚ್ಛಿಸುವುದಿಲ್ಲ. ನೀವು ಉಪವಾಸ ಸಂಖ್ಯೆಯನ್ನು ಪೂರ್ತಿಗೊಳಿಸಲು ಅನುಕೂಲವಾಗುವಂತೆಯೂ, ಸನ್ಮಾರ್ಗದ ಮೂಲಕ ನಿಮ್ಮನ್ನು ಪ್ರತಿಷ್ಠಿತಗೊಳಿಸಿದ ಅಲ್ಲಾಹನ ಮಹಿಮೆಯನ್ನು ಕೊಂಡಾಡುತ್ತಾ ಅವನಿಗೆ ಕೃತಜ್ಞರಾಗಿರಲಿಕ್ಕಾಗಿಯೂ ಈ ವಿಧಾನವನ್ನು ತೋರಿಸಿಕೊಡಲಾಗಿದೆ.” (ಅಲ್‌ಬಕರ 183-185)

ಇಬ್ನ್ ಉಮರ್(ﷺ) ರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: "ಇಸ್ಲಾಮ್ ಐದು ಕಾರ್ಯಗಳಲ್ಲಿ ಸ್ಥಾಪಿತಗೊಂಡಿದೆ. ಅಲ್ಲಾಹನಲ್ಲದೆ ಆರಾಧನೆಗೆ ಅರ್ಹರಾದವರು ಬೇರೆ ಯಾರೂ ಇಲ್ಲ, ಪ್ರವಾದಿ ಮುಹಮ್ಮದ್(ﷺ) ಯವರು ಅಲ್ಲಾಹನ ಸಂದೇಶವಾಹಕರಾಗಿದ್ದಾರೆ ಎಂಬ ಸತ್ಯಸಾಕ್ಷ್ಯದ ವಚನ, ನಮಾಝನ್ನು ಕ್ರಮಪ್ರಕಾರವಾಗಿ ನಿರ್ವಹಿಸುವುದು, ಝಕಾತ್ ಕೊಡುವುದು, ಹಜ್ಜ್ ನಿರ್ವಹಿಸುವುದು, ಉಪವಾಸದ ಅನುಷ್ಠಾನ, ಇವುಗಳು ಆ ಐದು ಕಾರ್ಯಗಳಾಗಿವೆ." (ಬುಖಾರಿ ಮುಸ್ಲಿಂ)

## ರಮದಾನ್ ಉಪವಾಸದ ಶ್ರೇಷ್ಠತೆ:

ಅಬೂ ಹುರೈರಾ(ﷺ) ರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: "ಒಬ್ಬನು ವಿಶ್ವಾಸವಿಟ್ಟು ಪ್ರತಿಫಲಾಪೇಕ್ಷೆಯಿಂದ ರಮದಾನ್‌ನ ಉಪವಾಸವನ್ನು ಅನುಷ್ಠಿಸಿದರೆ ಅವನ ಗತಕಾಲದ ಪಾಪಗಳು ಕ್ಷಮಿಸಲ್ಪಡುವುದು. ಒಬ್ಬನು ವಿಶ್ವಾಸವಿಟ್ಟು ಪ್ರತಿಫಲಾಪೇಕ್ಷೆಯಿಂದ ಲೈಲತುಲ್ ಕದ್ರ್‌ನ ರಾತ್ರಿಯಲ್ಲಿ ನಮಾಝ್ ನಿರ್ವಹಿಸಿದರೆ ಅವನ ಗತಕಾಲದ ಪಾಪಗಳು ಕ್ಷಮಿಸಲ್ಪಡುವುದು." (ಬುಖಾರಿ ಮುಸ್ಲಿಂ)

ಅಬೂ ಹುರೈರಾ(ﷺ) ರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: "ಅಲ್ಲಾಹನು ಹೀಗೆಂದಿರುವನು: ಮಾನವನ ಎಲ್ಲಾ ಕರ್ಮಗಳು ಅವನಿಗಾಗಿ ಇದೆ. ಉಪವಾಸವು ಅದರಿಂದ ಹೊರತಾಗಿದೆ. ಅದು ನನಗಾಗಿದೆ. ಅದರ ಪ್ರತಿಫಲವನ್ನು ನೀಡುವವನು ನಾನು. ಉಪವಾಸವು ಒಂದು ಗುರಾಣಿಯಾಗಿದೆ. ಆದುದರಿಂದ ನಿಮ್ಮಲ್ಲಿ ಯಾರೂ ಉಪವಾಸದ ದಿನದಲ್ಲಿ ಅಶ್ಲೀಲ ಮಾತುಗಳನ್ನು ಆಡಬಾರದು ಮತ್ತು ಜಗಳಕ್ಕಿಳಿಯಬಾರದು. ಯಾರಾದರೂ ತನ್ನನ್ನು ಬೈದರೆ ಅಥವಾ ಜಗಳಕ್ಕಿಳಿದರೆ ಅವನು ನಾನು ಉಪವಾಸಿಗನೆಂದು ಹೇಳಲಿ. ಮುಹಮ್ಮದರ ಆತ್ಮವು ಯಾರ ವಶದಲ್ಲಿದೆಯೋ ಅವನಾಣೆಗೂ ಸತ್ಯ. ಉಪವಾಸಿಗನ ಬಾಯಿಂದ ಹೊರಡುವ ವಾಸನೆಯು ಅಂತ್ಯದಿನದಲ್ಲಿ ಅಲ್ಲಾಹನ ಸನ್ನಿಧಿಯಲ್ಲಿ ಕಸ್ತೂರಿಗಿಂತಲೂ ಪರಿಮಳಯುಕ್ತವಾಗಿರುವುದು. ಉಪವಾಸಿಗನಿಗೆ ಎರಡು ಸಂತೋಷವಿದೆ. ಒಂದು ಉಪವಾಸ ತೊರೆಯುವಾಗ, ಮತ್ತೊಂದು ಅಲ್ಲಾಹನನ್ನು ಭೇಟಿಯಾಗುವಾಗ." (ಬುಖಾರಿ ಮುಸ್ಲಿಂ)

ಸಅ್‌ಲುಬಿನ್ ಸಅದ್(ﷺ) ರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳಿದರು: "ಸ್ವರ್ಗದಲ್ಲಿ ರಯ್ಯಾನ್ ಎಂಬ ದ್ವಾರವಿದೆ. ಅದು ಉಪವಾಸಿಗನಿಗಾಗಿದೆ. ಅಂತ್ಯದಿನದಲ್ಲಿ ಉಪವಾಸಿಗನು ಅದರ ಮೂಲಕ ಪ್ರವೇಶಿಸುತ್ತಾನೆ. ಉಪವಾಸಿಗರಲ್ಲದ ಯಾರೂ ಅವರೊಂದಿಗೆ (ಅದರಲ್ಲಿ) ಪ್ರವೇಶಿಸಲಾರರು. (ಆ ದ್ವಾರದ ಸನಿಹದಿಂದ) ಹೀಗೆ ಹೇಳಲ್ಪಡುವುದು: ಉಪವಾಸಿಗ ಎಲ್ಲಿದ್ದಾನೆ? ಹಾಗೆ ಅವರು ಮಾತ್ರ ಪ್ರವೇಶಿಸುತ್ತಾರೆ. ಅವರು ಪ್ರವೇಶಿಸಿದ ನಂತರ ಆ ದ್ವಾರವು ಮುಚ್ಚಲ್ಪಡುವುದು. ಆ ಬಳಿಕ ಅದರ ಮೂಲಕ ಯಾರನ್ನೂ ಕಳುಹಿಸಲಾಗುವುದಿಲ್ಲ." (ಬುಖಾರಿ ಮುಸ್ಲಿಂ)

## ಚಂದ್ರದರ್ಶನವಾಗುವುದರೊಂದಿಗೆ ಉಪವಾಸ ಕಡ್ಡಾಯವಾಗುತ್ತದೆ:

ನ್ಯಾಯವಂತನಾದ ಒಬ್ಬನಾದರೂ ಚಂದ್ರದರ್ಶನವಾಗಿದೆಯೆಂದು ಸಾಕ್ಷ್ಯ ನುಡಿಯುವುದು ಅಥವಾ ಶಅ್‌ಬಾನ್ ಮೂವತ್ತು ಪೂರ್ತಿಯಾದರೆ ರಮದಾನ್ ದೃಢಪಡುತ್ತದೆ.

ಇಬ್ನ್ ಉಮರ್(ﷺ) ಅವರಿಂದ ನಿವೇದನೆ: "ಜನರು ಚಂದ್ರದರ್ಶನವನ್ನು ನೋಡಲು ಒಗ್ಗೂಡಿದ್ದರು. ನಾನು ಚಂದ್ರದರ್ಶನವಾಗಿರುವುದನ್ನು ನೋಡಿ ಅದನ್ನು ಪ್ರವಾದಿ(ﷺ) ಯವರಿಗೆ ತಿಳಿಸಿದೆ. ಅದರ ಪ್ರಕಾರ ಪ್ರವಾದಿ(ﷺ) ಯವರು ಉಪವಾಸ ಅನುಷ್ಠಿಸಿದರಲ್ಲದೆ ಜನರೊಂದಿಗೂ ಅನುಷ್ಠಿಸುವಂತೆ ಹೇಳಿದರು." (ಅಬೂದಾವೂದ್)

ಆಕಾಶವು ಮೋಡದಿಂದ ಆವೃತ್ತಗೊಂಡಿರುವುದರಿಂದ ಚಂದ್ರದರ್ಶನ ಗೋಚರಿಸದಿದ್ದರೆ ಶಅ್‌ಬಾನನ್ನು ಮೂವತ್ತೆಂದು ಪರಿಗಣಿಸಿ ನಂತರ ಉಪವಾಸ ಆರಂಭಿಸಬೇಕು. ಅಬೂಹುರೈರಾ (ﷺ) ಅವರಿಂದ ಮೇಲೆ ಉಲ್ಲೇಖಿಸಿದ ಹದೀಸ್‌ನಿಂದ ಇದು ಸ್ಪಷ್ಟವಾಗುತ್ತದೆ.

## ರಮದಾನ್‌ನ ಉಪವಾಸ ಯಾರಿಗೆಲ್ಲ ಕಡ್ಡಾಯ?

ಪ್ರಾಯಪೂರ್ತಿಯಾದ, ಬುದ್ಧಿ ಹಾಗೂ ಆರೋಗ್ಯವಿರುವ ಪ್ರತಿಯೊಬ್ಬ ಸತ್ಯವಿಶ್ವಾಸಿಗೂ ಉಪವಾಸ ಕಡ್ಡಾಯವಾಗಿದೆ. ಮುಟ್ಟಾದವರು ಹಾಗೂ ಪ್ರಸವರಕ್ತವಿರುವವರು ಉಪವಾಸ ಅನುಷ್ಠಿಸಬೇಕಾಗಿಲ್ಲವೆನ್ನುವುದಕ್ಕೆ ಈ ಕೆಳಗಿನ ಹದೀಸ್ ಪುರಾವೆಯಾಗಿದೆ.

ಅಬೂ ಸಈದುಲ್ ಖುದ್ರಿ(ﷺ) ಅವರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: "ಸ್ತ್ರೀಯರು ಆರ್ತವ—ಪ್ರಸವರಕ್ತವಿರುವ ಸಮಯಗಳಲ್ಲಿ ನಮಾಝ್ ಹಾಗೂ ಉಪವಾಸ ನಿರ್ವಹಿಸಬಾರದು. ಅದು ಅವರಿಗೆ ಧರ್ಮದಲ್ಲಿರುವ ವಿನಾಯಿತಿಯಾಗಿದೆ." (ಮುಸ್ಲಿಂ)

ಅವರು ಅಂತಹ ಸಮಯಗಳಲ್ಲಿ ಉಪವಾಸ ಆಚರಿಸಿದರೆ ಅದು

ಸಿಂಧುವಾಗುವುದಿಲ್ಲ. ಏಕೆಂದರೆ ಆರ್ತವ—ಪ್ರಸವರಕ್ತಗಳಿಂದ ಶುದ್ಧವಾಗುವುದು ಉಪವಾಸದ ನಿಬಂಧನೆಗಳಲ್ಲಿ ಒಳಪಟ್ಟಿದೆ.

ಆಯಿಶಾ(ﷺ) ಹೇಳುತ್ತಾರೆ: "ಪ್ರವಾದಿ(ﷺ) ಯವರ ಕಾಲದಲ್ಲಿ ನಮಗೆ ಆರ್ತವ ಉಂಟಾದರೆ ಅನಂತರ ಉಪವಾಸವನ್ನು ಕಝಾ ನಿರ್ವಹಿಸಬೇಕೆಂದು ಅವರು ಆದೇಶಿಸುತ್ತಿದ್ದರು. ಆದರೆ ನಮಾಝ್ ಕಝಾ ನಿರ್ವಹಿಸಬೇಕೆಂದು ಅವರು ಹೇಳಿರಲಿಲ್ಲ." (ಬುಖಾರಿ)

## ವೃದ್ಧರು, ವೃದ್ಧೆಯರು ಮತ್ತು ರೋಗಶಮನದ ನಿರೀಕ್ಷೆಯಿಲ್ಲದವರು ಏನು ಮಾಡಬೇಕು?

ವೃದ್ಧಾಪ್ಯದಿಂದ ಉಪವಾಸ ಆಚರಿಸಲು ಅಸಾಧ್ಯವಾದವರು ಪ್ರತಿಯೊಂದು ಉಪವಾಸಕ್ಕೆ ಬದಲಾಗಿ ಒಬ್ಬೊಬ್ಬ ಬಡವನಿಗೆ ಆಹಾರ ನೀಡಿದರೆ ಸಾಕು.

﴿ أَيَّامًا مَّعْدُودَاتٍ ۚ فَمَن كَانَ مِنكُم
مَّرِيضًا أَوْ عَلَىٰ سَفَرٍ فَعِدَّةٌ مِّنْ أَيَّامٍ أُخَرَ ۚ
وَعَلَى الَّذِينَ يُطِيقُونَهُ فِدْيَةٌ طَعَامُ مِسْكِينٍ ۖ
فَمَن تَطَوَّعَ خَيْرًا فَهُوَ خَيْرٌ لَّهُ ۚ وَأَن تَصُومُوا
خَيْرٌ لَّكُمْ ۖ إِن كُنتُمْ تَعْلَمُونَ ﴿١٨٤﴾ ﴾

"(ಕಷ್ಟದಿಂದ ಮಾತ್ರವೇ) ಉಪವಾಸ ಸಾಧ್ಯವಾಗುವವರು (ಉಪವಾಸವಿರದಿದ್ದರೆ) ಅದಕ್ಕೆ ಪ್ರಾಯಶ್ಚಿತ್ತವಾಗಿ ಓರ್ವ ಬಡವನಿಗೆ ಆಹಾರ ನೀಡಬೇಕು" (2:184) ಎಂಬ ಆಯತ್ತಿನಿಂದ ಇದು ಸ್ಪಷ್ಟವಿದೆ.

ಅತ್ವಾಅ್(ﷺ) ಹೇಳುತ್ತಾರೆ: "ಕಷ್ಟದಿಂದಲ್ಲದೆ ಉಪವಾಸ ಆಚರಿಸಲು ಸಾಧ್ಯವಿರದವರು ಓರ್ವ ಬಡವನಿಗೆ ಆಹಾರವನ್ನು ಪ್ರಾಯಶ್ಚಿತ್ತವಾಗಿ ನೀಡಬೇಕೆಂಬ ಸೂಕ್ತವನ್ನು ಇಬ್ನ್ ಅಬ್ಬಾಸ್(ﷺ) ಪಾರಾಯಣ ಮಾಡಿ ಅದರ ವಿಧಿ ದುರ್ಬಲಗೊಳಿಸಲ್ಪಟ್ಟಿಲ್ಲವೆಂದು ಹೇಳುತ್ತಿದ್ದರು. ಅಂದರೆ ವೃದ್ಧರು ಮತ್ತು ವೃದ್ಧೆಯರಿಗೆ ಉಪವಾಸ ಆಚರಿಸಲು ಸಾಧ್ಯವಾಗುವುದಿಲ್ಲವೆಂದು ಭಾಸವಾದರೆ ಅವರು ಪ್ರತಿಯೊಂದು ಉಪವಾಸಕ್ಕೆ ಬದಲಾಗಿ ಒಬ್ಬೊಬ್ಬ ಬಡವನಿಗೆ ಆಹಾರ ನೀಡಿದರೆ ಸಾಕಾಗುತ್ತದೆ." (ಬುಖಾರಿ)

## ಗರ್ಭಿಣಿಯರು ಮತ್ತು ಮೊಲೆಯುಣಿಸುವವರು:

ಗರ್ಭಿಣಿಯರು ಮತ್ತು ಮೊಲೆಯುಣಿಸುವ ಸ್ತ್ರೀಯರು ಉಪವಾಸದಿಂದ ತಮಗೆ ಅಥವಾ ಮಗುವಿಗೆ ತೊಂದರೆಯಾಗುತ್ತದೆಯೆಂದು ಭಯಪಟ್ಟರೆ ಉಪವಾಸ ಆಚರಿಸದೆ ಅದಕ್ಕೆ ಬದಲಾಗಿ ಪ್ರಾಯಶ್ಚಿತ್ತ ಕೊಡಬೇಕಾಗಿದೆ. ಅನಂತರ ಕಝಾ ಆಚರಿಸಬೇಕಾಗಿಲ್ಲ.

ಇಬ್ನ್ ಅಬ್ಬಾಸ್(ﷺ) ಅವರಿಂದ ನಿವೇದನೆ: "ಗರ್ಭಿಣಿಯರಿಗೆ ತಮ್ಮ ಕುರಿತು ಹಾಗೂ ಮೊಲೆಯುಣಿಸುವವರಿಗೆ ಮಗುವಿನ ಕುರಿತು ಭಯವಿದ್ದರೆ ಅವರು ಉಪವಾಸ ಆಚರಿಸದೆ ಅದಕ್ಕೆ ಬದಲಾಗಿ ಪ್ರಾಯಶ್ಚಿತ್ತ ಮಾತ್ರ ನೀಡಿದರೆ ಸಾಕು. ನಂತರ ಸಂದಾಯ ಮಾಡಬೇಕಾಗಿಲ್ಲ." (ತ್ವಬರಿ)

## ಉಪವಾಸದ ಘಟಕಗಳು:

1. ನಿಯ್ಯತ್:

   ಕರ್ಮಗಳಿಗೆಲ್ಲ ಪ್ರತಿಫಲವು ಸಂಕಲ್ಪವನ್ನು ಆಧರಿಸಿಕೊಂಡಿದೆಯೆಂದು ಪ್ರವಾದಿ(ﷺ) ಯವರು ನೆನಪಿಸಿಕೊಟ್ಟಿದ್ದಾರೆ.

   ರಮದಾನ್‌ನ ಉಪವಾಸಕ್ಕೆ ಪ್ರತಿಯೊಂದು ದಿನ ಪ್ರಭಾತೋದಯಕ್ಕಿಂತ ಮೊದಲೇ ನಿಯ್ಯತ್ ಮಾಡಬೇಕು.

   ಹಫ್ಸಾ(ﷺ) ಅವರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: "ಪ್ರಭಾತೋದಯಕ್ಕಿಂತ ಮೊದಲು ನಿಯ್ಯತ್ ಮಾಡದವರ ಉಪವಾಸ ಸಿಂಧುವಲ್ಲ." (ಅಬೂದಾವೂದ್ ತಿರ್ಮುದಿ)

2. ಪ್ರಭಾತದಿಂದ ಪ್ರದೋಷದ ತನಕ ಉಪವಾಸ ಭಂಗವಾಗುವ ಕಾರ್ಯಗಳಿಂದ ದೂರವಿರುವುದು:

   ಅಲ್ಲಾಹನು ಹೇಳುತ್ತಾನೆ:

﴿ وَكُلُوا وَاشْرَبُوا حَتَّىٰ يَتَبَيَّنَ لَكُمُ الْخَيْطُ
الْأَبْيَضُ مِنَ الْخَيْطِ الْأَسْوَدِ مِنَ الْفَجْرِ ۖ
ثُمَّ أَتِمُّوا الصِّيَامَ إِلَى اللَّيْلِ ۚ ﴾

“ಇರುಳಿನ ಕರಿರೇಖೆಯಿಂದ ಉಷಾಕಾಲದ ಬಿಳಿರೇಖೆಯು ನಿಮಗೆ ಬೇರ್ಪಟ್ಟು ತೋರುವವರೆಗಿನ ನಿಶಾವಧಿಯಲ್ಲಿ ತಿನ್ನಿರಿ ಮತ್ತು ಕುಡಿಯಿರಿ. ಅನಂತರ ಈ ಕಾರ್ಯಗಳನ್ನೆಲ್ಲ ಬಿಟ್ಟು ರಾತ್ರಿಯವರೆಗೆ ನಿಮ್ಮ ಉಪವಾಸ ವ್ರತವನ್ನು ಪೂರ್ತಿಗೊಳಿಸಿರಿ.” (2:187)

## ಉಪವಾಸ ಭಂಗವಾಗುವ ಕಾರ್ಯಗಳು:

1. ಮನಃಪೂರ್ವಕ ಅನ್ನಪಾನೀಯಗಳ ಸೇವನೆ:

   ಒಬ್ಬನು ಮರೆತು ಏನನ್ನಾದರೂ ತಿಂದರೆ ಅಥವಾ ಕುಡಿದರೆ ನಂತರ ಅವನು ಉಪವಾಸ ಕಝಾ ನಿರ್ವಹಿಸಬೇಕಾಗಿಲ್ಲ ಹಾಗೂ ಪ್ರಾಯಶ್ಚಿತ್ತವನ್ನೂ ನೀಡಬೇಕಾಗಿಲ್ಲ. ಅವನ ಉಪವಾಸ ಪರಿಪೂರ್ಣವಾಗಿರುತ್ತದೆ.

   ಅಬೂಹುರೈರಾ(ﷺ) ರಿಂದ ನಿವೇದನೆ: “ಒಬ್ಬನು ಉಪವಾಸಿಗನಾಗಿರುವಾಗ ಮರೆತು ಏನನ್ನಾದರೂ ತಿಂದರೆ ಅಥವಾ ಕುಡಿದರೆ ಅವನು ತನ್ನ ಉಪವಾಸವನ್ನು ಪೂರ್ತಿಗೊಳಿಸಲಿ. ಅವನಿಗೆ ತಿನ್ನಿಸಿದವನು ಮತ್ತು ಕುಡಿಸಿದವನು ಅಲ್ಲಾಹನಾಗಿರುವನು.” (ಬುಖಾರಿ ಮುಸ್ಲಿಂ, ಇಬ್ನ್ ಮಾಜ)

2. ಉದ್ದೇಶಪೂರ್ವಕ ವಾಂತಿ ಮಾಡುವುದು:

   ಅಬೂಹುರೈರಾ(ﷺ) ರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: “ಮನಃಪೂರ್ವಕವಾಗಿ ವಾಂತಿ ಮಾಡಿಕೊಳ್ಳುವವನು ಉಪವಾಸವನ್ನು ಪುನಃ ಆಚರಿಸಲಿ. ಮನಃಪೂರ್ವಕವಾಗಿ ವಾಂತಿ ಮಾಡದವನು ನಂತರ ಉಪವಾಸ ಅನುಷ್ಠಿಸಬೇಕಾಗಿಲ್ಲ.” (ಅಬೂದಾವೂದ್)

3. ಮಹಿಳೆಯರಿಗೆ ಮಾಸಿಕ ಮುಟ್ಟು ಹಾಗೂ ಪ್ರಸವಾನಂತರದ ರಕ್ತಸ್ರಾವ (ಉಪವಾಸ ತೊರೆಯುವುದಕ್ಕಿಂತ ಸ್ವಲ್ಪ ಮುಂಚೆಯಾದರೂ ಸರಿ) :

4. ಸಂಸರ್ಗ ನಡೆಸುವುದು, ಅದರ ಮೂಲಕ ಉಪವಾಸ ಭಂಗವಾದವರು ಕೆಳಗೆ ನೀಡಲಾದ ಪ್ರಾಯಶ್ಚಿತ್ತವನ್ನು ನೀಡಬೇಕಾಗಿದೆ.

   ಅಬೂಹುರೈರಾ(ﷺ) ರಿಂದ ನಿವೇದನೆ: ನಾವು ಪ್ರವಾದಿ(ﷺ) ಯವರ ಜೊತೆಯಲ್ಲಿದ್ದಾಗ ಓರ್ವ ವ್ಯಕ್ತಿ ಆಗಮಿಸಿ ಹೇಳಿದ, “ಓ ಪ್ರವಾದಿಯವರೇ, ನಾನು ನಾಶವಾಗಿದ್ದೇನೆ.” ಅವರು ಕೇಳಿದರು: “ನಿನಗೇನಾಯಿತು?” ವ್ಯಕ್ತಿ: “ನಾನು ಉಪವಾಸಿಗನಾಗಿರುವಾಗ ಪತ್ನಿಯೊಂದಿಗೆ ಲೈಂಗಿಕ ಸಂಪರ್ಕದಲ್ಲಿ ಏರ್ಪಟ್ಟಿದ್ದೇನೆ.” ಆಗ ಪ್ರವಾದಿ(ﷺ) ಯವರು ಕೇಳುತ್ತಾರೆ: “ನಿನಗೆ ಓರ್ವ ಗುಲಾಮನನ್ನು ವಿಮೋಚಿಸಲು ಸಾಧ್ಯವಿದೆಯೇ?” ವ್ಯಕ್ತಿ: “ಸಾಧ್ಯವಿಲ್ಲ.”ಪ್ರವಾದಿ: “ನಿನಗೆ ನಿರಂತರವಾಗಿ ಎರಡು ತಿಂಗಳು ಉಪವಾಸ ಆಚರಿಸಲು ಸಾಧ್ಯವೇ?” ವ್ಯಕ್ತಿ: “ಇಲ್ಲ.” ಪ್ರವಾದಿ: “ನಿನಗೆ ಅರುವತ್ತು ಮಂದಿ ಬಡವರಿಗೆ ಆಹಾರ ನೀಡಲು ಸಾಧ್ಯವೇ?” ವ್ಯಕ್ತಿ: “ಇಲ್ಲ.” ಹೀಗಿರುವಾಗ ಯಾರೋ ಮಸೀದಿಗೆ ಒಂದು ಗೊನೆ ಖರ್ಜೂರವನ್ನು ತಂದು ಪ್ರವಾದಿ (ﷺ) ಯವರ ಸನ್ನಿಧಿಯಲ್ಲಿಟ್ಟರು. ಈ ಸಂದರ್ಭ ಪ್ರವಾದಿ (ﷺ) ಯವರು ವ್ಯಕ್ತಿಯನ್ನುದ್ದೇಶಿಸಿ ಹೇಳಿದರು. “ನೀನು ಈ ಖರ್ಜೂರವನ್ನು ಕೊಂಡೊಯ್ದು ಬಡಬಗ್ಗರಿಗೆ ಹಂಚಿಬಿಡು.” ಆ ವ್ಯಕ್ತಿ ಹೇಳಿದ : “ಈ ಎರಡು ಬೆಟ್ಟಗಳ ಮಧ್ಯೆ ನನಗಿಂತ ಬಡವರು ಬೇರೆ ಯಾರೂ ಇಲ್ಲ.” ಈ ಮಾತನ್ನು ಕೇಳಿ ಪ್ರವಾದಿ(ﷺ) ಯವರು ದವಡೆ ಹಲ್ಲುಗಳು ಕಾಣಿಸುವ ತನಕ ನಗುತ್ತಾ ಹೇಳುತ್ತಾರೆ: “ಹಾಗಿದ್ದರೆ ಇದನ್ನು ನೀನು ಮತ್ತು ನಿನ್ನ ಕುಟುಂಬದವರು ತಿನ್ನಿರಿ.” (ಬುಖಾರಿ ಮುಸ್ಲಿಂ)

## ಉಪವಾಸಿಗರು ಪಾಲಿಸಬೇಕಾದ ಶಿಷ್ಟಾಚಾರಗಳು:

1. ಸಹ್ರಿ (ಅತ್ತಾಳ): ಅನಸ್(ﷺ) ಅವರಿಂದ ನಿವೇದನೆ: ಪ್ರವಾದಿ (ﷺ) ಯವರು ಹೇಳುತ್ತಾರೆ: “ನೀವು ಸಹ್ರಿ ಉಣ್ಣಿರಿ. ನಿಶ್ಚಯವಾಗಿಯೂ ಸಹ್ರಿಯಲ್ಲಿ ಸಮೃದ್ಧಿಯಿದೆ.” (ಬುಖಾರಿ ಮುಸ್ಲಿಂ)

   ಸ್ವಲ್ಪ ನೀರು ಕುಡಿದರೂ ಸಹ್ರಿ ಉಂಡವನಾಗಿ ಮಾರ್ಪಡುತ್ತದೆ.

   ಇಬ್ನ್ ಉಮರ್(ﷺ) ರಿಂದ ನಿವೇದನೆ: ನೀವು ಸ್ವಲ್ಪ ನೀರು ಕುಡಿದಾದರೂ ಸಹ್ರಿ ಮಾಡಿರಿ. (ಇಬ್ನ್ ಮಾಜ ಇಬ್ನ್ ಹಿಬ್ಬಾನ್)

2. ಸಹ್ರಿಯನ್ನು ಪರಮಾವಧಿ ಮುಂದೂಡುವುದು ಸುನ್ನತ್.

   ಝೈದ್ ಬಿನ್ ಸಾಬಿತ್(ﷺ) ನಿವೇದನೆ: ನಾವು ಪ್ರವಾದಿ(ﷺ) ಯವರ ಜೊತೆಯಲ್ಲಿ ಸಹ್ರಿ ಉಂಡು ಸುಬುಹಿ ನಮಾಝ್ ನಿರ್ವಹಿಸಿದೆವು. ಆಗ ಅನಸ್(ﷺ) ಕೇಳಿದರು: “ಅದಾನ್ ಮತ್ತು ಸಹ್ರಿಯ ನಡುವೆ ಎಷ್ಟು ಸಮಯವಿತ್ತು?” ಝೈದ್(ﷺ) ಹೇಳುತ್ತಾರೆ: “ಪವಿತ್ರ ಕುರ್‌ಆನಿನ ಐವತ್ತು ಆಯತ್‌ಗಳನ್ನು ಪಾರಾಯಣ ಮಾಡುವಷ್ಟು ಸಮಯ.” (ಬುಖಾರಿ ಮುಸ್ಲಿಂ)

3. ಸಹ್ರಿ ಉಣ್ಣುತ್ತಿರುವಾಗ ಅದಾನ್ ಕರೆ ಕೇಳಿಸಿದರೆ ಕೈಯಲ್ಲಿರುವ ಆಹಾರವನ್ನು ತಿನ್ನುವುದರಲ್ಲಿ ತೊಂದರೆಯಿಲ್ಲ.

ಅಬೂಹುರೈರಾ(ﷺ) ರಿಂದ ನಿವೇದನೆ: "ನಿಮ್ಮಲ್ಲೋರ್ವರು ಆಹಾರ ಸೇವಿಸುತ್ತಿರುವಾಗ ಅದಾನ್ ಆಲಿಸಿದರೆ ಅಗತ್ಯವಿರುವುದನ್ನು ತಿನ್ನುವುದಕ್ಕಿಂತ ಮೊದಲು ನಿಲ್ಲಿಸಬೇಕಾಗಿಲ್ಲ." (ಅಬೂದಾವೂದ್ ಹಾಕಿಮ್)

4. ಉಪವಾಸದ ಅಂತಃಸತ್ವಕ್ಕೆ ತಕ್ಕುದಲ್ಲದ ಮನೋರಂಜನೆ ಅಶ್ಲೀಲ ಮಾತುಗಳ ವರ್ಜನೆ.

ಪ್ರವಾದಿ(ﷺ) ಯವರು ಹೇಳುತ್ತಾರೆ: "ಉಪವಾಸದ ದಿನಗಳಲ್ಲಿ ಯಾರೂ ಅಶ್ಲೀಲದ ಮಾತುಗಳನ್ನಾಡಬಾರದು. ಜಗಳಕ್ಕಿಳಿಯಬಾರದು. ತನ್ನೊಂದಿಗೆ ಯಾರಾದರೂ ಅಶ್ಲೀಲ ಮಾತುಗಳನ್ನಾಡಿದರೆ ಅಥವಾ ಜಗಳಕ್ಕಿಳಿದರೆ ಅವನು ನಾನು ಉಪವಾಸಿಗನೆಂದು ಹೇಳಿಕೊಂಡು ಹಿಂದೆ ಸರಿಯಲಿ." (ಅಬೂದಾವೂದ್ ಹಾಕಿಮ್)

"ಅಶ್ಲೀಲ ಮಾತು ಮತ್ತು ಕೃತಿಗಳನ್ನು ತೊರೆಯದವರು ಅನ್ನಪಾನೀಯಗಳನ್ನು ತೊರೆಯುವ ಯಾವ ಅಗತ್ಯವೂ ಅಲ್ಲಾಹನಿಗಿಲ್ಲ." (ಬುಖಾರಿ ಮುಸ್ಲಿಂ)

5. ದಾನಧರ್ಮಗಳ ವರ್ಧನೆ ಮತ್ತು ಕುರ್‌ಆನ್ ಪಾರಾಯಣ:

ಇಬ್ನ್ ಅಬ್ಬಾಸ್(ﷺ) ನಿವೇದನೆ: ಪ್ರವಾದಿ(ﷺ) ಯವರು ಬಹಳ ಔದಾರ್ಯವಂತರಾಗಿದ್ದರು. ರಮದಾನ್ ಆಗತವಾದಾಗ ಜಿಬ್ರೀಲರು ಬಂದು ಕುರ್‌ಆನ್ ಕಲಿಸಲು ಆರಂಭಿಸಿದಾಗ ಅವರ ಔದಾರ್ಯವು ಮತ್ತಷ್ಟು ವರ್ಧಿಸುತ್ತಿತ್ತು. ಜಿಬ್ರೀಲರನ್ನು ಭೇಟಿಯಾಗುವ ವೇಳೆ ಅವರು ಬಿರುಗಾಳಿಯಂತೆ ನಿರಂತರ ದಾನಶೀಲರಾಗುತ್ತಿದ್ದರು. (ಬುಖಾರಿ ಮುಸ್ಲಿಂ)

6. ಪಾರಣೆಗಾಗಿ ತ್ವರೆ ಮಾಡಿರಿ:

ಸಹ್ಲ್ ಬಿನ್ ಸಅದ್(ﷺ) ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: "ಜನರು ಉಪವಾಸ ತೊರೆಯಲು (ಇಫ್ತಾರ್) ತ್ವರೆ ಮಾಡುವ ಕಾಲದ ತನಕ ಒಳಿತಿನಲ್ಲಿರುವರು." (ಬುಖಾರಿ ಮುಸ್ಲಿಂ)

ಅನಸ್ ಬಿನ್ ಮಾಲಿಕ್(ﷺ) ನಿವೇದನೆ: ಪ್ರವಾದಿ(ﷺ) ಯವರು ನಮಾಝಿಗಿಂತ ಮೊದಲು ಕೆಲವು ಖರ್ಜೂರಗಳಿಂದ ಪಾರಣೆ ಮಾಡುತ್ತಿದ್ದರು. ಅದು ಲಭ್ಯವಿಲ್ಲದಿದ್ದರೆ ಉತ್ತೂತೆ, ಅದು ಲಭ್ಯವಿಲ್ಲದಿದ್ದರೆ ಸ್ವಲ್ಪ ನೀರು ಕುಡಿದು ಪಾರಣೆ ಮಾಡುತ್ತಿದ್ದರು. (ಸ್ವಹೀಹುಲ್ ಜಾಮಿಅ್ ಅಬೂದಾವೂದ್)

7. ಪಾರಣೆಯ ಸಮಯದ ಪ್ರಾರ್ಥನೆ:

ಮರ್ವಾನ್(ﷺ) ನಿವೇದನೆ: ಪ್ರವಾದಿ(ﷺ) ಯವರು ಉಪವಾಸ ತೊರೆಯುವಾಗ ಹೀಗೆ ಪ್ರಾರ್ಥಿಸುತ್ತಿದ್ದರು:

ذَهَـــبَ الظَّمَأُ وَابْتَلَّـــتِ الْعُرُوقُ وَثَبَـــتَ الْأَجْرُ إِنْ شَـــاءَ اللَّهُ.

"ನರನಾಡಿಗಳು ತೇವಗೊಂಡವು, ದಾಹವು ನೀಗಿತು, ಅಲ್ಲಾಹು ಇಚ್ಛಿಸಿದರೆ ಪ್ರತಿಫಲ ಖಾತರಿಯಾಯಿತು." (ಸ್ವಹೀಹುಲ್ ಜಾಮಿಅ್ ಅಬೂದಾವೂದ್)

## ಉಪವಾಸಿಗನು ಮಾಡಬಹುದಾದ ಸಂಗತಿಗಳು:

1. ಸೆಖೆಯಾದರೆ ದೇಹಕ್ಕೆ ನೀರು ಸುರುವಿಕೊಳ್ಳುವುದು:

ಅಬ್ದುರ್ರಹ್ಮಾನ್ ಅಬೂಬಕ್ಕರ್(ﷺ) ಕೆಲವು ಸಹಾಬಿಗಳಿಂದ ವರದಿ ಮಾಡುತ್ತಾರೆ. "ಪ್ರವಾದಿ(ﷺ) ಯವರು ಬಾಯಾರಿಕೆ ಅಥವಾ ಸೆಖೆಯಿಂದಾಗಿ 'ಅರ್ಜ್' ಎಂಬ ಸ್ಥಳದಲ್ಲಿ ನೀರು ಸೇದಿ ತನ್ನ ದೇಹಕ್ಕೆ ಸುರುವಿಕೊಳ್ಳುತ್ತಿರುವುದನ್ನು ನಾನು ನೋಡಿರುವೆನು." (ಅಬೂದಾವೂದ್)

2. ಅಮಿತವಾಗದ ರೀತಿಯಲ್ಲಿ ಬಾಯಿ ಮುಕ್ಕಳಿಸುವುದು, ಮತ್ತು ಮೂಗಿನ ಹೊಳ್ಳೆಗಳನ್ನು ಶುಚಿಗೊಳಿಸುವುದು.

ಉಪವಾಸಿಗನಲ್ಲದಿದ್ದರೆ ಮೂಗಿನ ಹೊಳ್ಳೆಗಳನ್ನು ಚೆನ್ನಾಗಿ ಶುಚಿಗೊಳಿಸಬೇಕೆಂದು ಅಬೂದಾವೂದ್ ವರದಿ ಮಾಡಿದ್ದಾರೆ.

3. ಕಾಮನೆಯನ್ನು ನಿಯಂತ್ರಿಸಲು ಸಾಧ್ಯವಾದವರು ಪತ್ನಿಯನ್ನು ಚುಂಬಿಸುವುದು.

ಆಯಿಶಾ(ﷺ) ರಿಂದ ನಿವೇದನೆ: ಪ್ರವಾದಿ(ﷺ) ಯವರು

*38 ನೇ ಪುಟಕ್ಕೆ*

# ಲೈಲತುಲ್ ಕದ್ರ್ ಎಂಬ ಪಾವನ ರಾತ್ರಿ

ಲೈಲತುಲ್ ಕದ್ರ್‌ನ ರಾತ್ರಿಯ ನಿಶ್ಚಿತತೆ ಲಭ್ಯವಾಗದಿರುವುದು ಸತ್ಯವಿಶ್ವಾಸಿಗಳ ಮಟ್ಟಿಗೆ ಉತ್ತಮವಾಗಿದೆಯೆಂದು ಪ್ರವಾದಿ(ﷺ) ಯವರು ಸ್ಪಷ್ಟಪಡಿಸಿದ್ದಾರೆ. ಲೈಲತುಲ್ ಕದ್ರ್‌ನ ಅವ್ಯಕ್ತತೆಯಿಂದಾಗಿ ಒಂದು ದಿನ ಮಾತ್ರ ಹೆಚ್ಚು ಸತ್ಕರ್ಮಗಳನ್ನೆಸಗುವುದಕ್ಕೆ ಬದಲಾಗಿ ಹೆಚ್ಚು ದಿನರಾತ್ರಿಗಳಲ್ಲಿ ಅತ್ಯಧಿಕ ಸತ್ಕರ್ಮಗಳನ್ನು ಮಾಡುವ ಅವಕಾಶವು ಲಭಿಸುತ್ತದೆ ಎಂದು ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ.

ಮಾನವ ಜನಾಂಗದ ವಿಮೋಚನೆಗಾಗಿ ಪವಿತ್ರ ಕುರ್‌ಆನ್ ರಮದಾನ್ ತಿಂಗಳಲ್ಲಿ ಅವತೀರ್ಣಗೊಳಿಸಲ್ಪಟ್ಟಿತು. ಸತ್ಯ ಮತ್ತು ಅಸತ್ಯವನ್ನು ಬೇರ್ಪಡಿಸುವ, ಮಾನವ ಜನಾಂಗವನ್ನು ಕತ್ತಲೆಯಿಂದ ಬೆಳಕಿನೆಡೆಗೆ ಕೊಂಡೊಯ್ಯುವ, ಲೋಕದ ಮುಂದೆ ಇಂದಿಗೂ ಆಶ್ಚರ್ಯಗಳ ಉಗ್ರಾಣವಾಗಿ ಉಳಿದಿರುವ ಪವಿತ್ರ ಕುರ್‌ಆನನ್ನು ಅಲ್ಲಾಹನು ಜಿಬ್ರೀಲ್ ಎಂಬ ಮಲಕ್‌ನ ಮೂಲಕ ಪ್ರವಾದಿ ಮುಹಮ್ಮದ್(ﷺ) ರವರಿಗೆ ಅವತೀರ್ಣಗೊಳಿಸಿದನು.

﴿ شَهۡرُ رَمَضَانَ ٱلَّذِيٓ أُنزِلَ فِيهِ ٱلۡقُرۡءَانُ هُدٗى لِّلنَّاسِ وَبَيِّنَٰتٖ مِّنَ ٱلۡهُدَىٰ وَٱلۡفُرۡقَانِۚ ﴾

“ಮಾನವರಿಗೆ ಸಾದ್ಯಂತ ಸನ್ಮಾರ್ಗ, ಮಾರ್ಗದರ್ಶನ ಮತ್ತು ಸತ್ಯಾ-ಸತ್ಯಗಳಲ್ಲಿರುವ ಅಂತರವನ್ನು ಸುವ್ಯಕ್ತವಾಗಿ ತಿಳಿಸುವ ಶಿಕ್ಷಣಗಳ-ನ್ನೊಳಗೊಂಡಿರುವ ಕುರ್‌ಆನ್ ಅವತೀರ್ಣಗೊಂಡಿರುವ ತಿಂಗಳು ರಮದಾನ್ ಆಗಿದೆ.” (2:185)

ಪ್ರವಾದಿ ಮುಹಮ್ಮದ್(ﷺ) ರಿಗೆ ವಿಭಿನ್ನ ಸಂದರ್ಭಗಳ-ಲ್ಲಿ 23 ವರ್ಷಗಳ ಕಾಲ ಕುರ್‌ಆನ್ ಅವತೀರ್ಣಗೊಂಡು ಪೂರ್ತಿಯಾಯಿತು. ಆದರೆ ಕುರ್‌ಆನ್ ಅದಕ್ಕಿಂತ ಮೊದಲೇ ಅಲ್ಲಾಹನ ಸನ್ನಿಧಿಯಲ್ಲಿ ಲೌಹುಲ್ ಮಹ್ಫೂಳ್‌ನಲ್ಲಿ ದಾಖಲಿಸಲ್ಪ-ಟ್ಟಿತು. ಅನಂತರ ಒಂದು ವಿಶೇಷ ರಾತ್ರಿಯಲ್ಲಿ ಅಲ್ಲಾಹನು ಅದನ್ನು ಪ್ರಥಮ ಆಕಾಶಕ್ಕೆ ಇಳಿಸಿದ. ಆ ರಾತ್ರಿಯೇ ಲೈಲತುಲ್ ಕದ್ರ್,

ಸೂರತುಲ್ ಕದ್ರ್‌ನಲ್ಲಿ ಹೀಗಿದೆ:

﴿ إِنَّآ أَنزَلۡنَٰهُ فِي لَيۡلَةِ ٱلۡقَدۡرِ ١ وَمَآ أَدۡرَىٰكَ مَا لَيۡلَةُ ٱلۡقَدۡرِ ٢ لَيۡلَةُ ٱلۡقَدۡرِ خَيۡرٞ مِّنۡ أَلۡفِ شَهۡرٖ ٣ تَنَزَّلُ ٱلۡمَلَٰٓئِكَةُ وَٱلرُّوحُ فِيهَا بِإِذۡنِ رَبِّهِم مِّن كُلِّ أَمۡرٖ ٤ سَلَٰمٌ هِيَ حَتَّىٰ مَطۡلَعِ ٱلۡفَجۡرِ ٥ ﴾

“ನಾವು ಇದನ್ನು (ಕುರ್‌ಆನನ್ನು) ಪ್ರತಿಷ್ಠಿತ ರಾತ್ರಿಯಲ್ಲಿ ಅವತೀರ್ಣ-ಗೊಳಿಸಿರುವೆವು. ಪ್ರತಿಷ್ಠಿತ ರಾತ್ರಿ ಏನೆಂದು ನಿಮಗೇನು ಗೊತ್ತು? ಪ್ರತಿಷ್ಠಿತ ರಾತ್ರಿಯು ಸಾವಿರ ಮಾಸಗಳಿಗಿಂತಲೂ ಹೆಚ್ಚು ಶ್ರೇಷ್ಠ-ವಾಗಿದೆ. ಮಲಕ್‌ಗಳು ಮತ್ತು ಜಿಬ್ರೀಲ್ ಆ ರಾತ್ರಿ ತಮ್ಮ ಪ್ರಭುವಿನ ಆಜ್ಞೆಯಿಂದ ಪ್ರತಿಯೊಂದು ಆದೇಶದೊಂದಿಗೆ ಇಳಿದು ಬರುತ್ತಾರೆ. ಆ ರಾತ್ರಿಯು ಪ್ರಭಾತೋದಯದ ವರೆಗೂ ಮಂಗಳಮಯ-ವಾಗಿದೆ.” (97:1-5)

ಪವಿತ್ರ ಕುರ್‌ಆನಿನ ಮತ್ತೊಂದು ಅಧ್ಯಾಯವಾದ ದುಖಾನ್‌ನಲ್ಲಿ ಹೀಗಿದೆ:




“ಹಾಮೀಮ್. ಈ ಸುವ್ಯಕ್ತ ಗ್ರಂಥದಾಣೆ. ನಿಶ್ಚಯವಾಗಿಯೂ ನಾವು ಇದನ್ನು ಒಂದು ಮಹಾ ಸಮೃದ್ಧ ರಾತ್ರಿಯಲ್ಲಿ ಅವತೀರ್ಣಗೊಳಿಸಿದೆವು. ಏಕೆಂದರೆ ನಾವು ಜನರಿಗೆ ಎಚ್ಚರಿಕೆ ನೀಡುವವರಾಗಿದ್ದೇವೆ. ಅದು ನಮ್ಮ ಅಪ್ಪಣೆಯಿಂದ ಸಕಲ ವಿಷಯಗಳ ಯುಕ್ತಿಪೂರ್ಣವಾದ ತೀರ್ಪು ಸಾದರಗೊಳಿಸವಂತಹ ರಾತ್ರಿಯಾಗಿತ್ತು.” (ದುಖಾನ್ 1-4)

ಮೇಲಿನ ಸೂಕ್ತಗಳಲ್ಲಿ ಹೇಳಲಾದ ರಾತ್ರಿಗಳ ಕುರಿತು ಪ್ರಾಮಾಣಿಕ ಕುರ್‌ಆನ್ ವ್ಯಾಖ್ಯಾನಗಳಲ್ಲಿ ಯಾವ ರೀತಿ ವಿವರಿಸಲ್ಪಟ್ಟಿದೆಯೆಂದು ನೋಡೋಣ.

ಇಬ್ನ್ ಅಬ್ಬಾಸ್(ﷺ) ಹೇಳುತ್ತಾರೆ: “ಅಲ್ಲಾಹನು ಸಮಗ್ರ ಕುರ್‌ಆನನ್ನು ಲೌಹುಲ್ ಮಹ್ಫೂಲ್‌ನಿಂದ ಪ್ರಥಮ ಆಕಾಶದ ಬೈತುಲ್ ಇಝ್ಝಗೆ ಅವತೀರ್ಣಗೊಳಿಸಿದ. ಅನಂತರ ಪ್ರತಿಯೊಂದು ಘಟನೆಗಳ ಆಧಾರದಲ್ಲಿ 23 ವರ್ಷಗಳ ಅವಧಿಯಲ್ಲಿ ಪ್ರವಾದಿ(ﷺ) ಯವರಿಗೆ ಅದನ್ನು ಅವತೀರ್ಣಗೊಳಿಸಿದ.” (ತಫ್ಸೀರ್ ಇಬ್ನ್ ಕಸೀರ್‌ನ 97:1-5ರ ವ್ಯಾಖ್ಯಾನದಲ್ಲಿ)

## ಲೈಲತುಲ್ ಕದ್ರ್ ಎಂದರೇನು?

ಲೈಲತುಲ್ ಕದ್ರ್‌ಗೆ ಯಾವ ಅರ್ಥವನ್ನು ನೀಡಬೇಕು ಎನ್ನುವುದರ ಕುರಿತು ಬೇರೆ ಬೇರೆ ಅಭಿಪ್ರಾಯಗಳಿವೆ. ಕದ್ರ್ ಎಂಬ ಪದಕ್ಕೆ ಅರಬಿ ಭಾಷೆಯಲ್ಲಿ ಸಂಕುಚಿತ, ಆದರ, ಗೌರವ, ವಿಧಿ ಮುಂತಾದ ಅರ್ಥಗಳಿವೆ. ಇದರಲ್ಲಿ ಯಾವ ಅರ್ಥವೂ ಸರಿ ಹೊಂದುತ್ತದೆ.

ಹಾಫಿಝ್ ಇಬ್ನ್ ಹಜರುಲ್ ಅಸ್ಖಲಾನಿ ಬುಖಾರಿ ವ್ಯಾಖ್ಯಾನ ಗ್ರಂಥವಾದ ಫತ್‌ಹುಲ್ ಬಾರಿಯಲ್ಲಿ ‘ಕಿತಾಬು ಫದ್ಲು ಲೈಲತುಲ್ ಕದ್ರ್’ನ ಆರಂಭದಲ್ಲಿ ಇದಕ್ಕೆ ಸಂಬಂಧಿಸಿದಂತೆ ಹೀಗೆ ವಿವರಿಸುತ್ತಾರೆ.

“ಈ ರಾತ್ರಿಯೊಂದಿಗೆ ಜೋಡಿಸಿ ಹೇಳುವ ಕದ್ರ್ ಎಂಬ ಪದದ ಉದ್ದೇಶವೇನು ಎನ್ನುವುದರ ಕುರಿತು ಭಿನ್ನಾಭಿಪ್ರಾಯಗಳಿವೆ. ಅವರು ಅಲ್ಲಾಹನನ್ನು ಗೌರವಿಸಬೇಕಾದ ರೀತಿಯಲ್ಲಿ ಗೌರವಿಸಲಿಲ್ಲ (ಕುರ್‌ಆನ್ 6:91) ಎಂಬ ಆಯತ್‌ನಲ್ಲಿ ಸೂಚಿಸಿದಂತೆ ತಅ್‌ದೀಂ ಅಥವಾ ಗೌರವ ಎನ್ನುವುದು ಅದರ ಒಂದು ಅರ್ಥವಾಗಿದೆಯೆಂದು ಹೇಳಲ್ಪಟ್ಟಿದೆ. ಆ ಪ್ರಕಾರ ಪ್ರಸ್ತುತ ರಾತ್ರಿ ಕುರ್‌ಆನ್ ಅವತೀರ್ಣಗೊಳಿಸಲ್ಪಟ್ಟಿರುವುದರಿಂದ ಅದು ಗೌರವಿಸಲ್ಪಟ್ಟಿತೆಂದೋ ಅಥವಾ ಮಲಕ್‌ಗಳ ಉಪಸ್ಥಿತಿಯಿಂದಲೋ ಕರುಣೆ, ಪಾಪ ವಿಮೋಚನೆ ಮುಂತಾದವುಗಳಿಂದ ಆದರಿಸಲ್ಪಟ್ಟಿತೆಂದೂ ಅರ್ಥೈಸಬಹುದಾಗಿದೆ.”

ಸೂರತು ತ್ವಲಾಖ್‌ನ ಏಳನೇ ವಚನದಲ್ಲಿರುವ “ವಮನ್ ಕದರ ಅಲೈಹಿ ರಿಝ್ಖುಹು” (ಒಬ್ಬನ ಉಪಜೀವನವು ಸಂಕೀರ್ಣಗೊಂಡ ನೆಲೆಯಲ್ಲಾಗಿದ್ದರೆ) ಎಂಬುದರಲ್ಲಿರುವ ಕದ್ರ್‌ನ ಅರ್ಥ ಪ್ರಕಾರ ಇದು ಸಂಕುಚಿತಗೊಂಡ ಎನ್ನುವುದನ್ನು ಸೂಚಿಸುತ್ತದೆಯೆಂದು ಹೇಳಲ್ಪಟ್ಟಿದೆ. ಆ ರಾತ್ರಿ ಯಾವುದೆಂದು ಗೌಪ್ಯವಾಗಿರಿಸಲ್ಪಟ್ಟಿದ್ದರಿಂದಲೋ ಅಥವಾ ಮಲಕ್‌ಗಳ ಆಧಿಕ್ಯದಿಂದ ಭೂಮಿಯು ಸಂಕುಚಿತಗೊಳ್ಳುವುದರಿಂದಲೋ ಇದಕ್ಕೆ ಈ ಅರ್ಥವನ್ನು ಉದ್ದೇಶಿಸಿರಬಹುದು.

ಮತ್ತೊಂದು ಅಭಿಪ್ರಾಯ ಕದ್ರ್ ಎಂಬ ಪದದಲ್ಲಿರುವ ದಾಲ್‌ಗೆ ಸುಕೂನಿಗೆ ಬದಲಾಗಿ ಫತ್‌ಹ್ ಇದೆ. ಇದರ ಪ್ರಕಾರ ಕದಾಅ್ ಅಥವಾ ವಿಧಿ ಎಂಬ ಅರ್ಥ ಬರುತ್ತದೆ. ಈ ಮೊದಲು ಉಲ್ಲೇಖಿಸಿದ ಸೂರತು ದುಖಾನಿನ ನಾಲ್ಕನೇ ವಚನದಲ್ಲಿ ಹೇಳಿದಂತೆ ಆ ರಾತ್ರಿಯಲ್ಲಿ ಯುಕ್ತಿಪೂರ್ಣವಾದ ಪ್ರತಿಯೊಂದು ಕಾರ್ಯವು ಬೇರ್ಪಡಿಸಿ ವಿವರಿಸಲ್ಪಡುತ್ತದೆ ಎಂಬದರಿಂದಲೂ ಇದೇ ಆಶಯವು ಲಭಿಸುತ್ತದೆ. ಇಮಾಮ್ ನವವಿಯವರು ಇದೇ ಅಭಿಪ್ರಾಯದೊಂದಿಗೆ ಅವರ ಮಾತನ್ನು ಆರಂಭಿಸುತ್ತಾರೆ.

ಮೇಲೆ ವಿವರಿಸಿದ ಆಯತ್‌ನ ಆಧಾರದಲ್ಲಿ ವಿದ್ವಾಂಸರು ಮಲಕ್‌ಗಳು ತೀರ್ಮಾನವನ್ನು ಬರೆದಿಡುವುದರಿಂದ ಆ ರಾತ್ರಿಗೆ ಲೈಲತುಲ್ ಕದ್ರ್ ಎಂದು ನಾಮಕರಣ ಮಾಡಲಾಯಿತೆಂದು ಹೇಳುತ್ತಾರೆಂದು ಇಮಾಮ್ ನನವಿ ಉಲ್ಲೇಖಿಸಿದ್ದಾರೆ. ಅಬ್ದುರ್ರ‍ಝ್ಝಾಕ್ ರಂತಹ ಕುರ್‌ಆನ್ ವ್ಯಾಖ್ಯಾನಕಾರರು ಮುಜಾಹಿದ್, ಇಕ್ರಿಮ, ಖತಾದ ಮೊದಲಾದವರಿಂದ ಸ್ವೀಕಾರಾರ್ಹವಾದ ನೆಲೆಯಲ್ಲಿ ಈ ಕಾರ್ಯವನ್ನು ಉಲ್ಲೇಖಿಸಿದ್ದಾರೆ.” (ಫತ್‌ಹುಲ್ ಬಾರಿ)

ಸ್ವಹೀಹ್ ಮುಸ್ಲಿಮ್‌ನ ವ್ಯಾಖ್ಯಾನ ಗ್ರಂಥವಾದ ಅಲ್ ಮಿನ್‌ಹಾಜ್ ಫೀ ಶರ್ಹಿ ಸ್ವಹೀಹಿ ಮುಸ್ಲಿಮ್‌ನಲ್ಲಿ ಇಮಾಮ್ ನವವಿ ಹೀಗೆ ವಿವರಿಸುತ್ತಾರೆ.

“ಆ ವರ್ಷದ ಆಹಾರ, ಆಯುಷ್ಯ, ತೀರ್ಮಾನ ಮುಂತಾದವು-ಗಳನ್ನು ಮಲಕ್‌ಗಳಿಗೆ ತೋರಿಸಲ್ಪಡುವ ದಿನವಾದುದರಿಂದ ಅದಕ್ಕೆ ಲೈಲತುಲ್ ಕದ್ರ್ ಎಂದು ನಾಮಕರಣ ಮಾಡಲ್ಪಟ್ಟಿತೆಂದು ವಿದ್ವಾಂಸರು ಹೇಳುತ್ತಾರೆ.

ಆ ರಾತ್ರಿಯಲ್ಲಿ ಯುಕ್ತಿಪೂರ್ಣವಾದ ಪ್ರತಿಯೊಂದು ಕಾರ್ಯವು ಬೇರ್ಪಡಿಸಿ ವಿವರಿಸಲ್ಪಡುತ್ತದೆಯೆಂದೂ, ಮಲಕ್‌ಗಳು ಮತ್ತು ಜಿಬ್ರೀಲ್ ಅವರ ಪ್ರಭುವಿನಿಂದ ಪ್ರತಿಯೊಂದು ಕಾರ್ಯಕ್ಕೆ ಸಂಬಂಧಪಟ್ಟ ಉತ್ತರದೊಂದಿಗೆ ಆ ರಾತ್ರಿಯಲ್ಲಿ ಇಳಿದು ಬರುತ್ತಾರೆಂದೂ ಕುರ್‌ಆನ್ ಹೇಳಿದೆ. ಅದರ ಅರ್ಥ ಆ ವರ್ಷಗಳು, ಕಾರ್ಯಗಳು, ಮಲಕ್‌ಗಳಿಗೆ ತೋರಿಸಲ್ಪಡುತ್ತದೆ ಮತ್ತು ಇಂತಹವುಗಳು ಅವರ ಹೊಣೆಗಾರಿಕೆಗಳಾಗಿವೆಯೆಂದು ನಿರ್ಣಯಿಸಲ್ಪಡುತ್ತದೆ ಎಂದಾಗಿದೆ. ಇವೆಲ್ಲವೂ ಅಲ್ಲಾಹನ ಪೂರ್ವ ನಿಶ್ಚಯ ಮತ್ತು ಅವನ ಜ್ಞಾನದ ಪ್ರಕಾರವೇ ಸಂಭವಿಸುತ್ತದೆ. ಆ ರಾತ್ರಿ ಲೋಕಾವಸಾನದ ತನಕ ನೆಲೆನಿಲ್ಲುತ್ತದೆಯೆಂದು ಸ್ವಹೀಹ್ ಹದೀಸ್‌ಗಳಿಂದ ದೃಢಪಟ್ಟಿದೆ.” (ಶರಹು ಮುಸ್ಲಿಂ)

ಸಂಕ್ಷಿಪ್ತದಲ್ಲಿ ಲೈಲತುಲ್ ಕದ್ರ್ ಕಾರ್ಯಗಳು ನಿರ್ಣಯಿಸಲ್ಪಡುವ ರಾತ್ರಿ ಅಲ್ಲಾಹನ ಮಹತ್ತರವಾದ ಪಾಪವಿಮೋಚನೆ, ಅನುಗ್ರಹ ಹಾಗೂ ಕುರ್‌ಆನಿನ ಅವತರಣದೊಂದಿಗೆ ಗೌರವಿಸಲ್ಪಟ್ಟ ರಾತ್ರಿ. ಮಲಕ್‌ಗಳ ಆಧಿಕ್ಯದಿಂದ ಭೂಮಿಯು ಸಂಕುಚಿತಗೊಳ್ಳುವ ರಾತ್ರಿ ಮುಂತಾದ ವಿಶೇಷಣಗಳೆಲ್ಲವೂ ಲೈಲತುಲ್ ಕದ್ರ್‌ಗೆ ಯುಕ್ತವಾಗುತ್ತದೆ.

## ಲೈಲತುಲ್ ಕದ್ರ್ ಯಾವಾಗ ?

ಪ್ರತಿಯೊಂದು ವರ್ಷ ಇಂತಹ ರಾತ್ರಿ ಲೈಲತುಲ್ ಕದ್ರ್ ಆಗಿದೆಯೆಂದು ಸ್ಪಷ್ಟವಾಗಿ ನಿಶ್ಚಯಿಸುವ ಯಾವ ಮಾರ್ಗವೂ ಇಲ್ಲ. ಏಕೆಂದರೆ ಆ ಕಾರ್ಯವನ್ನು ವಿವರಿಸುವ ಕುರ್‌ಆನ್ ವಚನಗಳಾ-ಗಲೀ, ಅಧಿಕೃತವಾದ ಪ್ರವಾದಿ ವಚನಗಳಾಗಲೀ ಇಲ್ಲದಿರುವುದು ಇದಕ್ಕೆ ಕಾರಣವಾಗಿದೆ.

ಆದರೆ ಇದೇ ಸಂದರ್ಭದಲ್ಲಿ ಪ್ರವಾದಿ(ﷺ) ಯವರು ಅದನ್ನು ನಿರೀ-ಕ್ಷಿಸಬಹುದಾದ ದಿನಗಳ ಸೂಚನೆಯನ್ನು ನೀಡಿದ್ದಾರೆ. ರಮದಾನ್‌ನ ಅಂತಿಮ ಹಂತದ ಬೆಸಸಂಖ್ಯೆಯ ರಾತ್ರಿಯಲ್ಲಿ ಅದನ್ನು ನಿರೀಕ್ಷಿಸ-ಬೇಕೆಂದು ಪ್ರವಾದಿ(ﷺ) ಯವರು ಹೇಳಿರುವರು.

ಆಯಿಶಾ(ؓ) ರಿಂದ ಉಲ್ಲೇಖ : ಪ್ರವಾದಿ(ﷺ) ಯವರು ಹೇಳುತ್ತಾರೆ: “ನೀವು ರಮದಾನ್‌ನ ಕೊನೆಯ ಹತ್ತರ ಬೆಸ ರಾತ್ರಿಗಳಲ್ಲಿ ಲೈಲತುಲ್ ಕದ್ರನ್ನು ನಿರೀಕ್ಷಿಸಿರಿ.” (ಬುಖಾರಿ)

ಇಬ್ನ್ ಅಬ್ಬಾಸ್(ؓ) ರಿಂದ ಉಲ್ಲೇಖ : ನಿಶ್ಚಯವಾಗಿಯೂ ಪ್ರವಾದಿ (ﷺ) ಯವರು ಹೀಗೆಂದಿರುವರು: “ನೀವು ಅದನ್ನು (ಲೈಲತುಲ್ ಕದ್ರನ್ನು) ರಮದಾನ್ ತಿಂಗಳ ಕೊನೆಯ ಹತ್ತರಲ್ಲಿ ಹುಡುಕಿರಿ. ಅಂದರೆ ಒಂಬತ್ತು, ಏಳು ಮತ್ತು ಐದು ಬಾಕಿಯಿರುವಾಗ.” (ಬುಖಾರಿ)

ಒಮ್ಮೆ ಪ್ರವಾದಿ(ﷺ) ಯವರು ಲೈಲತುಲ್ ಕದ್ರನ್ನು ಸ್ವಹಾಬಿಗಳಿಗೆ ತಿಳಿಸಲು ಮುಂದಾಗಿದ್ದರು. ಆದರೆ ನಂತರ ಅವರು ಮರೆವಿಗೀಡಾಗಿ ಆ ಜ್ಞಾನವು ಮೇಲಕ್ಕೆತ್ತಲ್ಪಟ್ಟಿತು. ಇಮಾಮ್ ಬುಖಾರಿಯವರು ಪ್ರಸ್ತುತ ಘಟನೆಯನ್ನು ಹೀಗೆ ವಿವರಿಸುತ್ತಾರೆ.

ಉಬಾದತ್ ಬಿನ್ ಸಾಮಿತ್(ؓ) ಅವರಿಂದ ಉಲ್ಲೇಖ : ಒಮ್ಮೆ ಪ್ರವಾದಿ(ﷺ) ಯವರು ನಮಗೆ ಲೈಲತುಲ್ ಕದ್ರ್‌ನ ಕುರಿತು ತಿಳಿಸಲು ಮುಂದಾದರು. ಆಗ ಮುಸ್ಲಿಮರಲ್ಲಿ ಒಳಪಟ್ಟ ಇಬ್ಬರು ಪರಸ್ಪರ ತರ್ಕಿಸಲಾರಂಭಿಸಿದರು.

ಪ್ರವಾದಿ(ﷺ) ಯವರು ಹೇಳುತ್ತಾರೆ: “ನಾನು ನಿಮಗೆ ಲೈಲತುಲ್ ಕದ್ರ್‌ನ ಕುರಿತು ತಿಳಿಸಲು ಹೊರಟಿದ್ದೆ. ಆಗ ಇಂತಿಂಥ ವ್ಯಕ್ತಿಗಳು ತಮ್ಮಲ್ಲಿ ಪರಸ್ಪರ ತರ್ಕದಲ್ಲಿ ಏರ್ಪಟ್ಟರು. ಆದುದರಿಂದ ಆ ಜ್ಞಾನವು ನನ್ನಿಂದ ಮೇಲಕ್ಕೆತ್ತಲ್ಪಟ್ಟಿತು. ಪ್ರಾಯಶಃ ಅದು ನಿಮ್ಮ ಮಟ್ಟಿಗೆ ಒಳಿತಾಗಿರಲೂಬಹುದು. ಆದುದರಿಂದ ನೀವು ಅದನ್ನು ಒಂಬತ್ತು, ಏಳು ಮತ್ತು ಐದರಲ್ಲಿ ಹುಡುಕಿರಿ.” (ಬುಖಾರಿ)

ಮೇಲೆ ಉಲ್ಲೇಖಿಸಿದ ಹದೀಸಿನಿಂದ ರಮದಾನ್ ಕೊನೆಯ ಹತ್ತರ 25, 27, 29 ರಾತ್ರಿಯಲ್ಲಿ ಆ ರಾತ್ರಿಯಿದೆ ಎನ್ನುವುದು ಸ್ಪಷ್ಟವಿದೆ. ಆದರೆ 21 ಮತ್ತು 23 ರ ರಾತ್ರಿಯನ್ನು ಸೂಚಿಸುವ ಹದೀಸ್‌ಗಳೂ ವರದಿಯಾಗಿವೆ. ಇಮಾಮ್ ಮುಸ್ಲಿಂ ಅವರ ಸಹೀಹ್‌ನಲ್ಲಿ ಹೀಗೆ ಉಲ್ಲೇಖಿಸಿದ್ದಾರೆ.

ಅಬೂಸಈದುಲ್ ಖುದ್ರಿ(ؓ) ರಿಂದ ನಿವೇದನೆ: ಅವರು ಹೇಳುತ್ತಾರೆ: ಪ್ರವಾದಿ(ﷺ) ಯವರು ರಮದಾನಿನ ಮೊದಲ ಹತ್ತರಲ್ಲಿ ಇಅ್‌ತಿಕಾಫ್ ಕೂತರು. ಅನಂತರ ಮಧ್ಯದ ಹತ್ತರಲ್ಲೂ ಇಅ್‌ತಿಕಾಫ್ ಕೂತರು. ಅವರು ಒಂದು ಚಿಕ್ಕ ತುರ್ಕಿ ಕುಬ್ಬಾದಲ್ಲಿರುತ್ತಿದ್ದರು. ಅದರ ಕವಾಟದಲ್ಲಿ ಒಂದು ಚಾಪೆಯಿತ್ತು.

ಅವರು (ಅಬೂ ಸಈದ್) ಹೇಳಿದರು. ಪ್ರವಾದಿ(ﷺ) ಯವರು ಚಾಪೆಯನ್ನು ಕೊಂಡೊಯ್ದು ಖುಬ್ಬಾದ ಒಂದು ಭಾಗದಲ್ಲಿಟ್ಟರು.

ಅನಂತರ ತಲೆ ಹೊರಹಾಕಿ ಜನರೊಂದಿಗೆ ಮಾತನಾಡಿದರು. ಜನರು ಅವರ ಸನಿಹಕ್ಕೆ ಬಂದರು. ಆಗ ಅವರು ಹೇಳಿದರು. "ನಾನು ಈ ರಾತ್ರಿ (ಲೈಲತುಲ್ ಕದ್ರ್) ಯನ್ನು ಹುಡುಕಿಕೊಂಡು ಮೊದಲ ಹತ್ತರಲ್ಲಿ ಇಅ್ತಿಕಾಫ್ ಕೂತಿದ್ದೆ. ಅನಂತರ ಮಧ್ಯದ ಹತ್ತರಲ್ಲೂ ಕೂತೆ. ಅನಂತರ ಅದು ಕೊನೆಯ ಹತ್ತರಲ್ಲಿದೆ-ಯೆಂದು ನನಗೆ ತಿಳಿಸಲ್ಪಟ್ಟಿತು. ಆದುದರಿಂದ ಯಾರಾದರೂ ನನ್ನ ಜೊತೆಯಲ್ಲಿ ಇಅ್ತಿಕಾಫ್ ಕೂರಲು ಬಯಸುವುದಾದರೆ ಅವರು ಇಅ್ತಿಕಾಫ್ ಕೂರಲಿ."

ಹಾಗೆ ಜನರು ಅವರೊಂದಿಗೆ ಇಅ್ತಿಕಾಫ್ ಕೂತರು. ಅವರು (ಪ್ರವಾದಿ) ಹೇಳುತ್ತಾರೆ: "ಅದು ನನಗೆ ಬೆಸ ಸಂಖ್ಯೆಯಲ್ಲಿ ಬರುವ ರಾತ್ರಿಯಾಗಿಯೂ, ಅದರ ಪ್ರಭಾತದಲ್ಲಿ ಮಳೆ ವರ್ಷಿಸಿ ನೀರು ಮತ್ತು ಕೆಸರಿನಲ್ಲಿ ಸುಜೂದ್ ನಿರ್ವಹಿಸುವಂತೆ ತೋರಿಸಲ್ಪಟ್ಟಿದೆ."

ಅಂದು ಇಪ್ಪತ್ತೊಂದನೇ ರಾತ್ರಿಯಾಗಿತ್ತು. ಪ್ರವಾದಿ(ﷺ) ಯವರು ಸುಬಹಿ ನಮಾಝ್ ನಿರ್ವಹಿಸಲು ಆರಂಭಿಸಿದರು. ಆಗ ಮಳೆ ಸುರಿದು ಮಸೀದಿ ಸೋರಲಾರಂಭಿಸಿತು. ನಾನು ನೀರು ಮತ್ತು ಆವೆ ಮಣ್ಣನ್ನು ನೋಡಿದೆ. ಪ್ರವಾದಿ(ﷺ) ಯವರು ಸುಬಹಿ ನಮಾಝಿನ ನಂತರ ಹೊರಬಂದರು. ಆಗ ಅವರ ಹಣೆ ಹಾಗೂ ಮೂಗಿನ ಮೇಲೆ ನೀರು ಮತ್ತು ಮಣ್ಣು ಅಂಟಿಕೊಂಡಿತ್ತು. ಆ ಘಟನೆ ಕೊನೆಯ ಹತ್ತರ ಇಪ್ಪತ್ತೊಂದನೇ ರಾತ್ರಿಯಲ್ಲಿ ಸಂಭವಿಸಿತ್ತು. (ಮುಸ್ಲಿಂ)

ಇಮಾಮ್ ಮುಸ್ಲಿಮರೇ ಇದೇ ಘಟನೆಯನ್ನು ಅಬ್ದುಲ್ಲಾಹಿ ಬಿನ್ ಉನೈಸ್(ﷺ) ರಿಂದಲೂ ಉಲ್ಲೇಖಿಸಿದ್ದಾರೆ. (ಹದೀಸ್ ನಂ 1168). ಪ್ರಸ್ತುತ ಹದೀಸಿನಲ್ಲಿ ಇಪ್ಪತ್ತೊಂದನೇ ರಾತ್ರಿಗೆ ಬದಲಾಗಿ 23 ನೇ ರಾತ್ರಿ ಎಂದಿದೆ.

ಸಂಕ್ಷಿಪ್ತದಲ್ಲಿ ಲೈಲತುಲ್ ಕದ್ರ್ ಯಾವಾಗ ಎಂದು ನಿಶ್ಚಿತವಾಗಿ ಹೇಳಲು ನಮಗೆ ಸಾಧ್ಯವಿಲ್ಲ. ನಮ್ಮ ಮಟ್ಟಿಗೆ ಪ್ರವಾದಿ(ﷺ) ಯವರು ಸೂಚಿಸಿದಂತೆ ಅದನ್ನು ಕೊನೆಯ ಹತ್ತರಲ್ಲಿ ಬೆಸಸಂಖ್ಯೆಯಲ್ಲಿ ಬರುವ ರಾತ್ರಿಯಲ್ಲಿ ನಿರೀಕ್ಷಿಸಬೇಕೆಂದಲ್ಲದೆ ಬೇರೆ ದಾರಿಯಿಲ್ಲ.

## 27 ನೇ ರಾತ್ರಿ ಮತ್ತು ಲೈಲತುಲ್ ಕದ್ರ್:

ಲೈಲತುಲ್ ಕದ್ರ್ ರಮದಾನಿನ 27ನೇ ರಾತ್ರಿಯಲ್ಲಿಯೇ ಇದೆಯೆಂದು ಅನೇಕರು ನಂಬುತ್ತಿದ್ದಾರೆ. ವಾಸ್ತವದಲ್ಲಿ ಪ್ರವಾದಿ(ﷺ) ಯವರಿಂದ ಇಂತಹ ಒಂದು ಅಭಿಪ್ರಾಯ ಸ್ವೀಕಾರಾರ್ಹವಾಗಿ ಉಲ್ಲೇಖಿಸಲ್ಪಟ್ಟಿ-ಲ್ಲ. ಅದೇ ಸಮಯ ಇಮಾಮ್ ಮುಸ್ಲಿಂ ಅಬೂಹುರೈರಾ(ﷺ) ರಿಂದ ಉಲ್ಲೇಖಿಸುವ ಒಂದು ಹದೀಸಿನಲ್ಲಿ ಹೀಗಿದೆ.

"ನಾವು ಪ್ರವಾದಿ(ﷺ) ಯವರ ಸನ್ನಿಧಿಯಲ್ಲಿ ಲೈಲತುಲ್ ಕದ್ರನ್ನು ಅನುಸ್ಮರಿಸಿಕೊಂಡು ಕೂತಿದ್ದೆವು. ಆಗ ಅವರು ಹೇಳಿದರು. ಚಂದ್ರನು ಉದಯಿಸುವಾಗ ಅದು ಒಂದು ಅರ್ಧಾಕೃತಿಯ-ಲ್ಲಾಗುವುದನ್ನು ನಿಮ್ಮಲ್ಲಿ ಯಾರಾದರೂ ಸ್ಮರಿಸುತ್ತಾರಾ?" (ಮುಸ್ಲಿಂ 1169-222)

ಈ ಹದೀಸ್‌ನಲ್ಲಿ ಹೇಳಲಾದ ಚಂದ್ರನ ವೈಶಿಷ್ಟ್ಯತೆಯು 27ನೇ ರಾತ್ರಿಯಲ್ಲಿ ಗೋಚರಿಸುತ್ತದೆಯೆಂದು ಅಲ್ ಪಾರಿಸಿ ಅಭಿಪ್ರಾಯ-ಪಟ್ಟಿರುವುದಾಗಿ ಅಸ್ಖಲಾನಿ ಫತ್‌ಹುಲ್ ಬಾರಿಯಲ್ಲಿ ಹೇಳುತ್ತಾರೆ. ಅದೇ ಸಮಯ ಈ ವೈಶಿಷ್ಟ್ಯತೆ 27 ರಂದು ಮಾತ್ರವಲ್ಲದೆ ಅಂತಿಮ ಹತ್ತರ ಎಲ್ಲ ರಾತ್ರಿಯಲ್ಲೂ ಗೋಚರವಾಗುತ್ತದೆ.

ಹಾಗೆಯೇ ಸ್ವಹೀಹ್ ಮುಸ್ಲಿಂನಲ್ಲಿಯೇ (ಹದೀಸ್ 1169-220) ಮತ್ತೊಂದು ಘಟನೆಯ ಉಲ್ಲೇಖವಿದೆ. ಉಬಯ್ಯಿ ಬಿನ್ ಕಅಬ್(ﷺ) ಈ ಹದೀಸಿನಲ್ಲಿ ಲೈಲತುಲ್ ಕದ್ರ್ ರಮದಾನಿನ ಕೊನೆಯ ಹತ್ತರ ಇಪ್ಪತ್ತೇಳನೇ ರಾತ್ರಿಯಲ್ಲಿದೆಯೆಂದು ಹೇಳುವುದನ್ನು ನೋಡಬಹು-ದಾಗಿದೆ. ಆದರೆ ನೀವು ಯಾವ ಆಧಾರದಲ್ಲಿ ಹೀಗೆ ಹೇಳುತ್ತಿರುವಿರಿ ಎಂಬ ಪ್ರಶ್ನೆಗೆ ಅವರು ನೀಡಿದ ಉತ್ತರ ಹೀಗಿದೆ.

"ಪ್ರವಾದಿ(ﷺ) ಯವರು ಹೇಳಿದ ಲಕ್ಷಣಗಳಿಂದ ಅಥವಾ ಹೆಚ್ಚು ಪ್ರಕಾಶಮಾನವಾಗಿರದ ಚಂದ್ರ ಎಂಬ ಲಕ್ಷಣ."

ಇಲ್ಲಿ ಉಬೈ(ﷺ) ರವರು ಪ್ರವಾದಿ(ﷺ) ಯವರು ಲೈಲತುಲ್ ಕದ್ರ್ ಇಪ್ಪತ್ತೇಳರ ರಾತ್ರಿಯಲ್ಲಾಗಿದೆಯೆಂದು ಹೇಳಿದ್ದರೆಂದು ಹೇಳುವುದಿಲ್ಲ. ಬದಲಾಗಿ ಅವರು ಹೇಳಿದ ಲಕ್ಷಣಗಳ ಆಧಾರದಿಂದ ಉಬೈ(ﷺ) ರವರೇ ಹಾಗೆ ಹೇಳಿದ್ದರು. ಅದು ಇತರ ರಾತ್ರಿಗ-ಳಲ್ಲಿಯೂ ಉಂಟಾಗಬಹುದು.

ಈ ದಿನದಲ್ಲಿ ಸತ್ಯವಿಶ್ವಾಸಿಗಳು ಅಲ್ಲಾಹನ ಸಂಪ್ರೀತಿಗೆ ಪಾತ್ರರಾಗುವ ಕಾರ್ಯದಲ್ಲಿ ನಿರತರಾಗಬೇಕು. ಈ ರಾತ್ರಿಯ ನಿಶ್ಚಿತತೆ ಲಭ್ಯವಾ-ಗದಿರುವುದು ಸತ್ಯವಿಶ್ವಾಸಿಗಳ ಮಟ್ಟಿಗೆ ಉತ್ತಮವಾಗಿದೆಯೆಂದು ಪ್ರವಾದಿ(ﷺ) ಯವರು ಸ್ಪಷ್ಟಪಡಿಸಿರುವುದನ್ನು ನಾವು ಈ ಮೊದಲು ಸೂಚಿಸಿದ್ದೇವೆ. ಲೈಲತುಲ್ ಕದ್ರ್‌ನ ಅವ್ಯಕ್ತತೆಯಿಂದಾಗಿ ಒಂದು ದಿನ ಮಾತ್ರ ಹೆಚ್ಚು ಸತ್ಕರ್ಮಗಳನ್ನೆಸಗುವುದಕ್ಕೆ ಬದಲಾಗಿ ಹೆಚ್ಚು ದಿನರಾತ್ರಿಗಳಲ್ಲಿ ಅತ್ಯಧಿಕ ಸತ್ಕರ್ಮಗಳನ್ನು ಮಾಡುವ ಅವಕಾಶವು ಲಭಿಸುತ್ತದೆ ಎಂದು ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲವಷ್ಟೆ. ■

# ರಮದಾನಿನಲ್ಲಿ ಅವತರಣಗೊಂಡ ಅನುಗ್ರಹ

ನಮ್ಮ ಸಹೋದರಿಯರಿಗೂ ನಾವು ಅವಕಾಶ ಮಾಡಿ ಕೊಡಬೇಕು. ಅವರು ಕೂಡಾ ಕುರ್‌ಆನ್ ಓದಲಿ ಮತ್ತು ಕಲಿಯಲಿ. ಅವರು ರಮದಾನ್ ತಿಂಗಳಿಡೀ ಅಡುಗೆಮನೆಯಲ್ಲಿ ಕಾಲಕಳೆಯಬೇಕಾದವರಲ್ಲ. ನಾವು ಕುರ್‌ಆನ್ ಸ್ಪರ್ಧೆಯಲ್ಲಿ ನಮ್ಮ ಸಹೋದರಿಯರು ಪಾಲ್ಗೊಳ್ಳುವಂತೆ ಮಾಡಬೇಕು. ತನ್ನಿಮಿತ್ತ ಅವರಲ್ಲಿ ಕುರ್‌ಆನಿನ ಬಗ್ಗೆ ಆಸಕ್ತಿ ಮೂಡುವಂತೆ ಪ್ರಯತ್ನಿಸಬೇಕು.

ಲೋಕವು ನಿಟ್ಟುಸಿರು ಬಿಡುತ್ತಿತ್ತು. ಸ್ವಾತಂತ್ರ್ಯ ಹಾಗೂ ವಿಮೋಚನೆಗಾಗಿ ಅಳುತ್ತಿತ್ತು. ಬಡ್ಡಿಗೆ ಹಣವನ್ನು ಪಡೆದು ಅದನ್ನು ಸಂದಾಯ ಮಾಡಲು ಸಾಧ್ಯವಾಗದೆ ಭಾರದ ಮೇಲೆ ಭಾರವನ್ನು ಹೊತ್ತುಕೊಂಡವರು. ಮಕ್ಕಾದ ಬೀದಿಗಳಲ್ಲಿ ಶ್ರೀಮಂತರು ಮತ್ತು ಪ್ರತಿಷ್ಠಿತರ ಕಪಿಮುಷ್ಟಿಯ-ಲ್ಲಿ ಸಿಲುಕಿ ವಿಲವಿಲನೆ ಒದ್ದಾಡುತ್ತಿದ್ದ ಸ್ತ್ರೀಯರ ಆಕ್ರಂದನಗಳು. ಸ್ವಂತ ರಕ್ತವನ್ನು ಹಂಚಿಕೊಂಡು ಹುಟ್ಟಿದ ಜೀವವನ್ನು ಅದೇ ಅವಸ್ಥೆಯಲ್ಲಿ ಹೂಳುವಾಗ ಕರುಣೆಯ ಸ್ವಲ್ಪಾಂಶಗಳೂ ಇಲ್ಲದ ನೋಟಗಳು. ಯುದ್ಧಗಳು, ಅಕ್ರಮಗಳು ತುಂಬಿ ತುಳುಕುತ್ತಿದ್ದ ಮದ್ಯದ ಪಿಪಾಯಿಗಳು... ಎಣಿಸಿ ಮುಗಿಸಲಾಗದಂತಹ ಕೆಡುಕಿನ ವಿಜ್ರಂಭನೆ. ಅವೆಲ್ಲವುಗಳಿಗಿಂತ ಗಂಭೀರತೆಯೊಂದಿಗೆ ಪ್ರಜ್ವಲಿ-ಸುತ್ತಿದ್ದ ಶಿರ್ಕ್. ಕಅ್‌ಬಾಲಯದ ಸುತ್ತಲೂ ತಲೆಯೆತ್ತಿ ನಿಂತಿದ್ದ ವಿಗ್ರಹಗಳು. ಸಫಾ ಮತ್ತು ಮರ್ವಾದಲ್ಲಿ ಇಸ್ವಾಫ್ ಹಾಗೂ ನಾಇಲ ಮೂರ್ತಿ. ಔಲಿಯಾಗಳ ಹೆಸರಲ್ಲಿ ಬಿಟ್ಟುಬಿಡಲಾದ ಒಂಟೆಗಳು. ಮಹಾತ್ಮರಿಗಾಗಿ ಪ್ರತ್ಯೇಕವಾಗಿರಿಸಲ್ಪಟ್ಟ ಕೃಷಿಸ್ಥಳಗಳು... ಎಲ್ಲೆಡೆ-ಗಳಲ್ಲೂ ಕತ್ತಲು... ಕಾರ್ಗತ್ತಲು... ಶಿರ್ಕ್, ಕುಫ್ರ್, ಶೋಷಣೆ ಮತ್ತು ಅಕ್ರಮಗಳ ಗಾಢಾಂಧಕಾರ.

ಅದೊಂದು ರಮದಾನ್ ಆಗಿತ್ತು. ಜಿಬ್ರೀಲರು ದಿವ್ಯ ಗ್ರಂಥದ ಪ್ರಥಮ ವಚನಗಳೊಂದಿಗೆ ಇಳಿದುಬಂದರು. ಇದು ಇಪ್ಪತ್ತ-ಮೂರು ವರ್ಷಗಳ ಕಾಲ ನಿರಂತರವಾಗಿ ಮುಂದುವರಿಯಿತು. ಮನುಷ್ಯರೊಂದಿಗೆ ಜಿನ್ನ್‌ಗಳೂ ಆಶ್ಚರ್ಯಚಕಿತರಾದರು. ಸ್ತ್ರೀಯರು ಮಕ್ಕಳು ಗುಲಾಮರು ಅನಾಥರಿಗೆ ಸಂತೋಷವಾಯಿತು. ಏಕೆಂದರೆ ಸ್ವಾತಂತ್ರ್ಯದ ಬಾಗಿಲು ತೆರೆಯಲ್ಪಟ್ಟಿತ್ತು. ತಮಗೆ ಹಕ್ಕುಗಳು ಲಭಿಸುತ್ತದೆ. ತಾವು ಪರಿಗಣಿಸಲ್ಪಡುತ್ತೇವೆ. ಯಾವುದೇ ಗೊತ್ತು-ಗುರಿಗಳಿಲ್ಲದೆ ಜೀವಿಸುತ್ತಿದ್ದವರಿಗೆ ಜೀವನದ ದಿಕ್ಕನ್ನು ನಿಶ್ಚಯಿಸಲು ಸಾಧ್ಯವಾಯಿತು. ಅದರೊಂದಿಗೆ ಜೀವನದಲ್ಲಿ ಸಂತೋಷ ಲಾಸ್ಯವಾಡಿತು. ಒಳಿತನ್ನು ತಿಳಿದುಕೊಂಡರು. ಸೃಷ್ಟಿಕರ್ತನ ಮುಂದೆ ಸರ್ವವೂ ಸಮರ್ಪಿಸಲ್ಪಟ್ಟಿತು. ಅಲ್ಲಾಹನು ಕುರ್‌ಆನನ್ನು ಪರಿಚ-ಯಿಸುವುದನ್ನು ನೋಡಿರಿ.

﴿ إِنَّ هَٰذَا ٱلْقُرْءَانَ يَهْدِى لِلَّتِى هِىَ أَقْوَمُ وَيُبَشِّرُ ٱلْمُؤْمِنِينَ ٱلَّذِينَ يَعْمَلُونَ ٱلصَّٰلِحَٰتِ أَنَّ لَهُمْ أَجْرًا كَبِيرًا ﴿٩﴾ وَأَنَّ ٱلَّذِينَ لَا يُؤْمِنُونَ بِٱلْءَاخِرَةِ أَعْتَدْنَا لَهُمْ عَذَابًا أَلِيمًا ﴿١٠﴾ ﴾

"ವಾಸ್ತವದಲ್ಲಿ ಈ ಕುರ್‌ಆನ್ ಅತ್ಯಂತ ನೇರ ಮಾರ್ಗವನ್ನು ತೋರಿ-ಸಿಕೊಡುತ್ತದೆ. ಇದನ್ನು ಸ್ವೀಕರಿಸಿಕೊಂಡು ಸತ್ಕರ್ಮವೆಸಗಿದವರಿಗೆ ದೊಡ್ಡ ಸತ್ಫಲವಿದೆಯೆಂಬ ಸುವಾರ್ತೆಯನ್ನು ನೀಡುತ್ತದೆ. ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸದವರಿಗೆ ನಾವು ಅವರಿಗೆ ಘೋರ

ಯಾತನೆಯನ್ನು ಸಿದ್ಧಗೊಳಿಸಿಟ್ಟಿದ್ದೇವೆಂದು ತಿಳಿಸುತ್ತದೆ.” (17:9-10)

ಪವಿತ್ರ ಕುರ್‌ಆನಿನ ಸಂದೇಶ ಮತ್ತು ಅದರ ಅವತರಣವನ್ನು ನೆನಪಿಸುತ್ತಾ ರಮದಾನ್ ಪುನರಾವರ್ತನೆಗೊಳ್ಳುತ್ತಿದೆ. ಕುರ್‌ಆನಿನ ಅವತರಣದ ಪ್ರಸ್ತಾಪದೊಂದಿಗೇ ರಮದಾನಿನ ವೈಶಿಷ್ಟ್ಯತೆಯು ವಿವರಿಸಲ್ಪಟ್ಟಿದೆ.

﴿ شَهْرُ رَمَضَانَ ٱلَّذِىٓ أُنزِلَ فِيهِ ٱلْقُرْءَانُ
هُدًى لِّلنَّاسِ وَبَيِّنَٰتٍ مِّنَ ٱلْهُدَىٰ وَٱلْفُرْقَانِ ۚ
فَمَن شَهِدَ مِنكُمُ ٱلشَّهْرَ فَلْيَصُمْهُ ۖ وَمَن كَانَ
مَرِيضًا أَوْ عَلَىٰ سَفَرٍ فَعِدَّةٌ مِّنْ أَيَّامٍ أُخَرَ ۗ
يُرِيدُ ٱللَّهُ بِكُمُ ٱلْيُسْرَ وَلَا يُرِيدُ بِكُمُ ٱلْعُسْرَ
وَلِتُكْمِلُوا۟ ٱلْعِدَّةَ وَلِتُكَبِّرُوا۟ ٱللَّهَ عَلَىٰ
مَا هَدَىٰكُمْ وَلَعَلَّكُمْ تَشْكُرُونَ ١٨٥ ﴾

“ಮಾನವರಿಗೆ ಸಾದ್ಯಂತ ಸನ್ಮಾರ್ಗ, ಮಾರ್ಗದರ್ಶನ ಮತ್ತು ಸತ್ಯಾಸತ್ಯಗಳಲ್ಲಿರುವ ಅಂತರವನ್ನು ಸುವ್ಯಕ್ತವಾಗಿ ತಿಳಿಸುವ ಶಿಕ್ಷಣಗಳನ್ನೊಳಗೊಂಡಿರುವ ಕುರ್‌ಆನ್ ಅವತೀರ್ಣಗೊಂಡಿರುವ ತಿಂಗಳು ರಮದಾನ್ ಆಗಿದೆ. ಆದುದರಿಂದ ಯಾವನಾದರೂ ಈ ತಿಂಗಳನ್ನು ಹೊಂದಿದಾಗ ಅವನು ಆ ಸಂಪೂರ್ಣ ತಿಂಗಳ ಉಪವಾಸ ವೃತವನ್ನಾಚರಿಸಬೇಕು. ಯಾವನಾದರೂ ರೋಗಿಯಾಗಿದ್ದರೆ ಅಥವಾ ಪ್ರಯಾಣಿಕನಾಗಿದ್ದರೆ ಆತನು ಇತರ ದಿನಗಳಲ್ಲಿ ಉಪವಾಸ ದಿನಗಳ ಸಂಖ್ಯೆಯನ್ನು ಪೂರ್ತಿಗೊಳಿಸಬೇಕು. ಅಲ್ಲಾಹನು ನಿಮಗೆ ಸೌಲಭ್ಯವನ್ನೀಯಲು ಬಯಸುತ್ತಾನೆ. ನಿಮ್ಮನ್ನು ಕಷ್ಟಕ್ಕೀಡುಮಾಡಲು ಇಚ್ಛಿಸುವುದಿಲ್ಲ. ನೀವು ಉಪವಾಸ ಸಂಖ್ಯೆಯನ್ನು ಪೂರ್ತಿಗೊಳಿಸಲು ಅನುಕೂಲವಾಗುವಂತೆಯೂ, ಸನ್ಮಾರ್ಗದ ಮೂಲಕ ನಿಮ್ಮನ್ನು ಪ್ರತಿಷ್ಠಿತಗೊಳಿಸಿದ ಅಲ್ಲಾಹನ ಮಹಿಮೆಯನ್ನು ಕೊಂಡಾಡುತ್ತಾ ಅವನಿಗೆ ಕೃತಜ್ಞರಾಗಿರಲಿಕ್ಕಾಗಿಯೂ ಈ ವಿಧಾನವನ್ನು ತೋರಿಸಿಕೊಡಲಾಗಿದೆ.” (ಅಲ್‌ಬಕರ 185)

ಈ ವಚನದ ಮೊದಲ ಭಾಗದಲ್ಲಿ ಕುರ್‌ಆನ್ ಜನರಿಗೆ ಮಾರ್ಗದರ್ಶನವೆಂದೂ ನಂತರ ಹಿದಾಯತ್ ದಯಪಾಲಿಸಿರುವುದರ ಹೆಸರಲ್ಲಿ ಅಲ್ಲಾಹನನ್ನು ಸ್ತುತಿಸಲು ಉಪವಾಸ ಆಚರಿಸಬೇಕೆಂದೂ ಹೇಳಿರುವಾಗ ರಮದಾನ್ ಮತ್ತು ಕುರ್‌ಆನಿನ ಅಬೇಧ್ಯ ಸಂಬಂಧವು ನಮಗೆ ಸ್ಪಷ್ಟವಾಗುತ್ತದೆ.

ಕುರ್‌ಆನನ್ನು ಕಲಿಯಲು ಮತ್ತು ತಿಳಿಯಲು ರಮದಾನ್ ಇತರ ಸಮಯಗಳಿಗಿಂತ ರಮದಾನನ್ನು ಹೆಚ್ಚು ಸದುಪಯೋಗಪಡಿಸಿಕೊಳ್ಳಬೇಕು ಎಂಬುದರಲ್ಲಿ ಸಂಶಯವಿಲ್ಲ. ಜಿಬ್ರೀಲರು ಪ್ರತಿಯೊಂದು ರಮದಾನಿನಲ್ಲಿ ಆಗಮಿಸಿ ಕುರ್‌ಆನ್ ಓದಿ ಹೇಳುತ್ತಿದ್ದರು. ಪ್ರವಾದಿ (ﷺ) ಯವರು ಮೃತಪಡುವ ಮೊದಲಿನ ರಮದಾನ್‌ನಲ್ಲಿ ಎರಡು ಬಾರಿ ಬಂದಿದ್ದರು. ಪಾವನ ರಮದಾನ್ ಕುರ್‌ಆನಿಗೆ ನಿಕಟವಾಗಲು ಮತ್ತು ಅದರ ಜ್ಞಾನವನ್ನು ವರ್ಧಿಸುವ ಮೂಲಕ ಅಲ್ಲಾಹನ ಸಂಪ್ರೀತಿಗೆ ಪಾತ್ರರಾಗಲು ಪ್ರಶಸ್ತವಾದ ತಿಂಗಳಾಗಿದೆ.

ಈ ರಮದಾನನ್ನು ನಾವು ಕುರ್‌ಆನ್ ಪಾರಾಯಣ, ಅಧ್ಯಯನ, ಆಶಯಗಳ ಮನನ ಹಾಗೂ ಕಂಠಪಾಠ ಮಾಡಿಕೊಳ್ಳಲು ಸದುಪಯೋಗಪಡಿಸಿಕೊಳ್ಳಬೇಕು. ನಮ್ಮ ಜೀವನದಲ್ಲಿ ಇನ್ನೊಂದು ರಮದಾನ್ ಪುನರಾವರ್ತನೆಗೊಳ್ಳುತ್ತದೆಯೇ ಎಂದು ಹೇಳಲು ಸಾಧ್ಯವಿಲ್ಲ. ಅದನ್ನು ಸದುಪಯೋಗಪಡಿಸಿಕೊಂಡವನು ಯಶಸ್ವಿಯಾದನು. ಹಾಗೆ ಮಾಡದವನು ತೀರಾ ನಷ್ಟಕ್ಕೊಳಗಾಗುವನು.

ಕುರ್‌ಆನಿನ ನೆರಳಲ್ಲಿ ಜೀವಿಸಲು ಸಾಧ್ಯವಾಗುವುದು ಒಂದು ದೊಡ್ಡ ಅನುಗ್ರಹವಾಗಿದೆ. ಅದನ್ನು ಆಸ್ವದಿಸಿದವನೇ ಅದನ್ನು ತಿಳಿಯಬಲ್ಲ. ಕುರ್‌ಆನ್ ಮೂಲಕ ಅಲ್ಲಾಹನು ಜನರೊಂದಿಗೆ ಮಾತನಾಡುತ್ತಾನೆ.

“ನಾವು ಇವರಿಗೆ ಓದಿ ಹೇಳಲಾಗುತ್ತಿರುವ ಗ್ರಂಥವನ್ನು ನಿಮ್ಮ ಮೇಲೆ ಅವತೀರ್ಣಗೊಳಿಸಿರುವುದು ಇವರಿಗೆ (ನಿದರ್ಶನಕ್ಕೆ) ಸಾಕಾಗದೆ? ನಿಶ್ಚಯವಾಗಿಯೂ ಸತ್ಯವಿಶ್ವಾಸವಿರಿಸುವವರಿಗೆ ಇದರಲ್ಲಿ ಕೃಪೆ ಹಾಗೂ ಉಪದೇಶವಿದೆ.” (29:50)

## ಕುರ್‌ಆನ್ ಮನುಷ್ಯರಿಗೆ ಲಭಿಸಿದ ಮಹಾ ಅನುಗ್ರಹವಾಗಿದೆ.

﴿ قُلْ بِفَضْلِ ٱللَّهِ وَبِرَحْمَتِهِۦ فَبِذَٰلِكَ فَلْيَفْرَحُوا۟
هُوَ خَيْرٌ مِّمَّا يَجْمَعُونَ ٥٨ ﴾

“(ಓ ಪ್ರವಾದಿಯವರೇ) ಹೇಳಿರಿ. ಇದನ್ನು ಅವತೀರ್ಣಗೊಳಿಸಿರುವುದು ಅಲ್ಲಾಹನ ಅನುಗ್ರಹ ಮತ್ತು ಕೃಪೆಯಾಗಿರುತ್ತದೆ. ಇದಕ್ಕಾಗಿ ಜನರು ಸಂತೋಷಪಡಬೇಕು. ಜನರು ಶೇಖರಿಸುತ್ತಿರುವ ಎಲ್ಲ ವಸ್ತುಗಳಿಗಿಂತಲೂ ಇದು ಉತ್ತಮವಾಗಿದೆ.” (10:58)

ಸಚ್ಚರಿತ ಪೂರ್ವಿಕರು ಕುರ್‌ಆನಿನ ಪಾರಾಯಣ, ಅಧ್ಯಯನ ಮತ್ತು

ಚರ್ಚೆಯಿಂದ ರಮದಾನ್‌ಗಳನ್ನು ಧನ್ಯಗೊಳಿಸಿದರು. ಅದು ಅವರ ಜೀವನದ ಎಲ್ಲಾ ಕ್ಷೇತ್ರಗಳಲ್ಲಿ ಪ್ರಭಾವ ಬೀರಿತು.

ಪ್ರವಾದಿ(ﷺ) ಯವರು ನಿಮ್ಮಲ್ಲಿ ಕುರ್‌ಆನ್ ಕಲಿತವನು ಮತ್ತು ಕಲಿಸಿದವನು ಅತ್ಯುತ್ತಮನಾಗಿರುವನೆಂದು ಹೇಳಿರುವರು. ನಾವು ರಮದಾನಿನಲ್ಲಿ ನಮ್ಮ ಮನೆ ಹಾಗೂ ಮಸೀದಿಗಳ ಈ ಒಂದು ಅಗತ್ಯಕ್ಕಾಗಿ ಸದ್ಬಳಕೆ ಮಾಡಿಕೊಳ್ಳಬೇಕು. ಮನೆಯಲ್ಲಿ ಯಜಮಾನ ಕುರ್‌ಆನ್ ಪಾರಾಯಣ ಮಾಡುತ್ತಾರೆ. ಅಥವಾ ಅದರ ಸಾಮರ್ಥ್ಯವಿರುವ ಬೇರೆ ಯಾರಾದರೂ ಪಠಿಸುತ್ತಾರೆ. ಉಳಿದವರು ಅದನ್ನು ಆಲಿಸಬೇಕು.

ಹಾಗೆಯೇ ಅದರ ಅರ್ಥ ಮತ್ತು ಆಶಯಗಳನ್ನು ಕಲಿಯುವ ಪರಿಸರವೂ ನಿರ್ಮಾಣವಾಗಬೇಕು. ರಮದಾನಿನ ಪ್ರತಿಯೊಂದು ದಿನದಲ್ಲಿ ನಿಶ್ಚಿತ ಸಮಯವನ್ನು ಇದಕ್ಕಾಗಿ ಮೀಸಲಿಡಬೇಕು. ಅರ್ಥ ತಿಳಿಯದವರಿಗೆ ಕನಿಷ್ಟಪಕ್ಷ ಪಾರಾಯಣವನ್ನಾದರೂ ಮಾಡಬೇಕು. ರಮದಾನಿನಲ್ಲಿ ರೂಢಿಸಿಕೊಳ್ಳುವ ಈ ಅಭ್ಯಾಸವು ಹಲವೊಮ್ಮೆ ನಂತರವೂ ನೆಲೆನಿಲ್ಲುವ ಸಾಧ್ಯತೆಯಿದೆ. ಮನೆಗಳಲ್ಲಿ ಮಾತ್ರವಲ್ಲದೆ ಮಸೀದಿಗಳಲ್ಲಿ ಕೂಡ ಕುರ್‌ಆನ್ ಪಾರಾಯಣದ ಧ್ವನಿ ಮೊಳಗಬೇಕು.

ಲೈಲತುಲ್ ಕದ್ರ್ ರಮದಾನಿನಲ್ಲಿರುವ ಅತ್ಯಂತ ಶ್ರೇಷ್ಠವಾದ ರಾತ್ರಿಯಾಗಿದೆ. ಆ ರಾತ್ರಿಯಲ್ಲಿಯೇ ಕುರ್‌ಆನ್ ಅವತೀರ್ಣಗೊಂಡಿತು.

﴿ إِنَّآ أَنزَلْنَٰهُ فِى لَيْلَةِ ٱلْقَدْرِ ١ ﴾

“ನಾವು ಇದನ್ನು (ಕುರ್‌ಆನನ್ನು) ಪ್ರತಿಷ್ಠಿತ ರಾತ್ರಿಯಲ್ಲಿ ಅವತೀರ್ಣಗೊಳಿಸಿರುವೆವು.” (97:1)

ಅಲ್ಲಾಹನು ಆ ರಾತ್ರಿಯನ್ನು ಅನುಗ್ರಹೀತ ರಾತ್ರಿಯೆಂದು ಪರಿಚಯಿಸಿದ್ದಾನೆ.

﴿ إِنَّآ أَنزَلْنَٰهُ فِى لَيْلَةٍ مُّبَٰرَكَةٍ ۚ
إِنَّا كُنَّا مُنذِرِينَ ٣ ﴾

“ನಿಶ್ಚಯವಾಗಿಯೂ ನಾವು ಇದನ್ನು ಒಂದು ಅನುಗ್ರಹೀತ ರಾತ್ರಿಯಲ್ಲಿ ಅವತೀರ್ಣಗೊಳಿಸಿರುವೆವು. ಏಕೆಂದರೆ ನಾವು ಜನರಿಗೆ ಎಚ್ಚರಿಕೆ ನೀಡುವವರಾಗಿದ್ದೇವೆ.” (44:3)

ಪೂರ್ವಿಕ ದೈವಿಕ ಗ್ರಂಥಗಳು ಕೂಡ ರಮದಾನ್‌ನಲ್ಲಿಯೇ ಅವತೀರ್ಣಗೊಂಡಿದೆಯೆಂದು ತಿಳಿಸುವ ಪ್ರವಾದಿವಚನಗಳಿವೆ. ಅಂತಿಮ ದೈವಿಕ ಗ್ರಂಥವಾದ ಕುರ್‌ಆನಿಗೆ ರಮದಾನಿನೊಂದಿಗಿರುವ ಸಂಬಂಧದ ಕಾರಣದಿಂದ ಪೂರ್ವಿಕರು ರಮದಾನಿನಲ್ಲಿ ಕುರ್‌ಆನಿನ ವಿಷಯವಾಗಿ ಅತ್ಯಂತ ಶ್ರದ್ಧೆ ವಹಿಸುತ್ತಿದ್ದರು.

ಖತಾದ(ﷺ) ರವರು ಪ್ರತಿ ಏಳು ದಿನಗಳಲ್ಲಿ ಕುರ್‌ಆನ್ ಪಾರಾಯಣ ಮಾಡಿ ಮುಗಿಸುತ್ತಿದ್ದರು. ಆದರೆ ರಮದಾನಿನಲ್ಲಿ ಮೂರು ದಿನಗಳಲ್ಲಿಯೇ ಅದನ್ನು ಪೂರ್ತಿಗೊಳಿಸುತ್ತಿದ್ದರು. ಪೂರ್ವಿಕರು ನಮಗೆ ಮಾದರಿಯಾಗಿದ್ದಾರೆ.

ಕುರ್‌ಆನ್ ಪಠಿಸದಿರುವುದು, ಅಧ್ಯಯನ ಮಾಡದಿರುವುದು, ಅದರ ಕುರಿತು ಚಿಂತಿಸದಿರುವುದು, ವಾಸ್ತವದಲ್ಲಿ ಅದರ ನಿರಾಕರಣೆಯಾಗುತ್ತದೆ. ಕುರ್‌ಆನಿನ ಕುರಿತ ಚಿಂತನೆ ಅಲ್ಲಾಹನನ್ನು ಅರಿತು ಪರಲೋಕ ಭಯವನ್ನು ಮೂಡಿಸಲು ತುಂಬಾ ಸಹಾಯಕವಾಗಿದೆ. ಕುರ್‌ಆನ್ ಕೇವಲ ಪಾರಾಯಣಕ್ಕೆ ಮಾತ್ರ ಮೀಸಲಾದ ಗ್ರಂಥವಲ್ಲ.

﴿ كِتَٰبٌ أَنزَلْنَٰهُ إِلَيْكَ مُبَٰرَكٌ لِّيَدَّبَّرُوٓا۟ ءَايَٰتِهِۦ
وَلِيَتَذَكَّرَ أُو۟لُوا۟ ٱلْأَلْبَٰبِ ٢٩ ﴾

“ಇದೊಂದು ಅತಿ ಸಮೃದ್ಧವಾದ ಗ್ರಂಥವಾಗಿದ್ದು ಇವರು ಇದರ ಸೂಕ್ತಗಳ ಕುರಿತು ಚಿಂತನೆ ನಡೆಸಲೆಂದು ಮತ್ತು ಬುದ್ಧಿಜೀವಿಗಳು ಇದರಿಂದ ಉಪದೇಶ ಪಡೆಯುವಂತಾಗಲೆಂದು ನಾವು ಇದನ್ನು ನಿಮಗೆ ಅವತೀರ್ಣಗೊಳಿಸಿದ್ದೇವೆ.” (38-29:)

ನಾವು ಕುರ್‌ಆನ್ ನಮ್ಮೊಂದಿಗೆ ಏನು ಹೇಳುತ್ತದೆಯೆಂದು ಕೂಡಾ ತಿಳಿದಿರದ ಒಂದು ಜನತೆಯಾಗಿ ಮಾರ್ಪಡಬಾರದು. ಈ ನೆಲೆಯಲ್ಲಿ ರಮದಾನ್ ಕುರ್‌ಆನನ್ನು ತಿಳಿಯಲು ಮತ್ತು ಅದರ ಆದೇಶವನ್ನು ಪಾಲಿಸುವ ಒಂದು ವೇದಿಕೆಯಾಗಿ ಅಥವಾ ಆರಂಭವಾಗಿ ಉಪಯೋಗಿಸಲು ನಾವು ಸಫಲರಾಗಬೇಕು. ಕುರ್‌ಆನ್ ಪಠಿಸುವ ನಮ್ಮ ಈಮಾನ್ ಮತ್ತು ತಕ್ವಾ ವರ್ಧಿಸಬೇಕಾಗಿದೆ. ಇಂಥವರು ಅತ್ಯುತ್ತಮ ಜನರಾಗಿರುತ್ತಾರೆ.

﴿ إِنَّمَا ٱلْمُؤْمِنُونَ ٱلَّذِينَ إِذَا ذُكِرَ ٱللَّهُ

وَجِلَتْ قُلُوبُهُمْ وَإِذَا تُلِيَتْ عَلَيْهِمْ ءَايَٰتُهُۥ زَادَتْهُمْ
إِيمَٰنًا وَعَلَىٰ رَبِّهِمْ يَتَوَكَّلُونَ ﴿٢﴾

"ಅಲ್ಲಾಹನ ಪ್ರಸ್ತಾಪ ಕೇಳಿದೊಡನೆ ಹೃದಯದಲ್ಲಿ ನಡುಕವುಂಟಾಗುವವರೇ ನಿಜವಾದ ಮೂಮಿನರು. ಅವರ ಮುಂದೆ ಅಲ್ಲಾಹನ ಸೂಕ್ತಗಳನ್ನು ಓದಿದಾಗ ಅವರ ಸತ್ಯವಿಶ್ವಾಸವು ವೃದ್ಧಿಯಾಗುತ್ತದೆ. ಮತ್ತು ಅವರು ತಮ್ಮ ಪ್ರಭುವಿನ ಮೇಲೆ ಭರವಸೆಯಿಡುತ್ತಾರೆ." (8:2)

ಈ ಒಂದು ಅವಸ್ಥೆ ಸಾಧ್ಯವಾಗಬೇಕಾದರೆ ನಾವು ಕುರ್‌ಆನಿಗೆ ನಿಕಟರಾಗಲೇ ಬೇಕು. ಲಭಿಸಿದ ಅವಕಾಶವನ್ನು ವ್ಯರ್ಥಗೊಳಿಸಬಾರದು. ಅದು ಯಾವಾಗಲೂ ನಷ್ಟವಾಗಬಹುದು. ಬುದ್ಧಿವಂತರು ಲಭಿಸಿದ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳುತ್ತಾರೆ. ಕೆಲವರು ರಮದಾನಿನಲ್ಲಿ ಯಾವುದೇ ಪ್ರಯೋಜನವಿಲ್ಲದ ವ್ಯರ್ಥ ಕಾರ್ಯಗಳಲ್ಲಿ ಏರ್ಪಡುತ್ತಾರೆ. ಹೀಗಾಗಬಾರದು.

ನಮ್ಮ ಸಹೋದರಿಯರಿಗೂ ನಾವು ಅವಕಾಶ ಮಾಡಿ ಕೊಡಬೇಕು. ಅವರು ಕೂಡಾ ಕುರ್‌ಆನ್ ಓದಲಿ ಮತ್ತು ಕಲಿಯಲಿ. ಅವರು ರಮದಾನ್ ತಿಂಗಳಿಡೀ ಅಡುಗೆಮನೆಯಲ್ಲಿ ಕಾಲಕಳೆಯಬೇಕಾದವರಲ್ಲ. ನಾವು ಕುರ್‌ಆನ್ ಸ್ಪರ್ಧೆಯಲ್ಲಿ ನಮ್ಮ ಸಹೋದರಿಯರು ಪಾಲ್ಗೊಳ್ಳುವಂತೆ ಮಾಡಬೇಕು. ತನ್ನಿಮಿತ್ತ ಅವರಲ್ಲಿ ಕುರ್‌ಆನಿನ ಬಗ್ಗೆ ಆಸಕ್ತಿ ಮೂಡುವಂತೆ ಪ್ರಯತ್ನಿಸಬೇಕು. ಒಂದು ಮನೆಯಲ್ಲಿ ಮಾತಾಪಿತರಿಗೆ ಕುರ್‌ಆನಿನೊಂದಿಗಿರುವ ಸಂಬಂಧವು ಮಕ್ಕಳಿಗೆ ಮಾದರಿಯಾಗುತ್ತದೆ ಎನ್ನುವುದನ್ನು ನಾವು ಈ ಸಂದರ್ಭದಲ್ಲಿ ಮರೆಯಬಾರದು. ■

*16 ನೇ ಪುಟದಿಂದ*

## ರಯ್ಯಾನ್ ಎಂಬ ಕವಾಟದ ಅತಿಥಿ

ವರ್ಧಿಸುವ ಹೊಸ ಮನಸ್ಸು.

ಸತ್ಯವಿಶ್ವಾಸಿಯು ರಮದಾನಿನಲ್ಲಿ ಅದರ ಪಾವನ ಸಮಯಗಳನ್ನು ಆಟ, ವಿನೋದ, ನಿದ್ದೆ, ಟಿ.ವಿ. ವೀಕ್ಷಣೆ, ಮೊಬೈಲ್ ಗೇಮ್‌ನಲ್ಲಿ ನಿರತರಾಗಿ ವ್ಯರ್ಥಗೊಳಿಸದೆ ಸದುಪಯೋಗಪಡಿಸಿಕೊಳ್ಳಬೇಕು.

ರಮದಾನಿನಲ್ಲಿ ಜೀವಿಸಿದ್ದರೂ ಪಾಪವಿಮೋಚನೆ ಸಿಗದವರು ದಿವ್ಯ ಕಾರುಣ್ಯದಿಂದ ವಂಚಿತರಾಗಲಿ ಎಂದು ಜಿಬ್ರೀಲರು(ﷺ) ಪ್ರಾರ್ಥಿಸಿದ ಪ್ರಾರ್ಥನೆ ಹಾಗೂ ಪ್ರವಾದಿ(ﷺ) ಯವರು ಅದಕ್ಕೆ ಹೇಳಿದ ಆಮೀನ್‌ನ ಶಬ್ದವು ನಮ್ಮ ಮನಸ್ಸಿನಲ್ಲಿ ಅನುರಣಿಸುತ್ತಿರಲಿ.

ಅವಕಾಶಗಳು ಅಲ್ಲಾಹನ ಅನುಗ್ರಹವಾಗಿದೆ. ಅವು ಪುನರಾವರ್ತನೆಗೊಳ್ಳಬೇಕೆಂದಿಲ್ಲ. ಇಂದಿನ ಪತ್ರಿಕೆಯಲ್ಲಿ ನಿಧನವಾರ್ತೆಗಳಿವೆ. ನಾಳೆಯೂ ಇರುತ್ತದೆ. ಅದರಲ್ಲಿ ಒಂದು ನಮ್ಮದೇ ಆಗಿರಬಾರದೆಂದಿಲ್ಲ. ಮುಂದಿನ ರಮದಾನಿನಲ್ಲಿ ನಾವು ಬದುಕಿರುತ್ತೇವೆಯೋ? ಹೋಗಲಿ, ಈ ರಮದಾನ್ ತಿಂಗಳಾದರೂ ನಮಗೆ ಪೂರ್ತಿ ಲಭಿಸುತ್ತದೆಯೇ? ಖಾತರಿಯಿಲ್ಲ. ಆದುದರಿಂದ ಯಾವ ಸತ್ಕಾರ್ಯವನ್ನೂ ಮುಂದೂಡದಿರಿ.

ಉಪವಾಸವ್ರತವು ಮನುಷ್ಯನನ್ನು ಸತ್ಯಮಾರ್ಗದಲ್ಲಿನ ಹೋರಾಟಕ್ಕೆ ಅಣಿಗೊಳ್ಳುವಂತೆ ಮಾಡುತ್ತದೆ. ಆತನ ಆಂತರಿಕ ಬಾಹ್ಯ ಪ್ರಭೆಯಾಗಿ ಹೊರಹೊಮ್ಮುತ್ತದೆ. ತ್ಯಾಗ ಸಂದರ್ಭಗಳಲ್ಲಿ ಅಲ್ಲಾಹನ ಸಂಪ್ರೀತಿಗೋಸ್ಕರ ಹಸಿವು ದಾಹಗಳನ್ನು ನಿರ್ಲಕ್ಷಿಸಿ ಕಠಿಣ ದುಡಿಮೆ ಮಾಡುವುದು ಅನಿವಾರ್ಯವಾಗಿರುತ್ತದೆ. ಈ ಸಹನೆ ಕರಗತ ಮಾಡಿಕೊಳ್ಳಲು ಹಾಗೂ ಕಷ್ಟದ ವೇಳೆಗಳಲ್ಲಿ ಸಂಕಷ್ಟಭರಿತ ಅನುಭವ ಗಳಿಸಲು ಅತ್ಯಂತ ಸೂಕ್ತ ಉಪಾಧಿ ಉಪವಾಸ ವ್ರತವೇ ಆಗಿದೆ. ಈ ಕಾರಣದಿಂದಲೇ ಪ್ರವಾದಿ(ﷺ) ಯವರು ಈ ತಿಂಗಳನ್ನು ಸಹನೆಯ ತಿಂಗಳು ಎಂದು ಕರೆದಿದ್ದಾರೆ.

ಅನ್ನಪಾನೀಯಗಳಿಂದ ದೂರ ಉಳಿಯುವ ಉಪವಾಸಿಗನ ಬಾಯಿಂದ ದುರ್ವಾಸನೆ ಹೊರಸೂಸುತ್ತಿರುತ್ತದೆ. ಈ ಮುಜುಗರದಿಂದ ಆತನನ್ನು ಸಾಂತ್ವನಪಡಿಸುತ್ತಾ ಪ್ರವಾದಿ(ﷺ) ಯವರು ಹೇಳುತ್ತಾರೆ: "ಉಪವಾಸಿಗನ ಬಾಯಿಂದ ಹೊರಬರುವ ದುರ್ವಾಸನೆಯು ಅಲ್ಲಾಹನ ಬಳಿ ಕಸ್ತೂರಿಗಿಂತಲೂ ಪ್ರಿಯವಾದ ಸುವಾಸನೆಯಾಗಿರುತ್ತದೆ."

ಉಪವಾಸಿಗನನ್ನು ಸ್ವಾಗತಿಸಲು ಸ್ವರ್ಗದ ರಮ್ಯ ಮನೋಹರ ತೋಟದಲ್ಲಿ ರಯ್ಯಾನ್ ಎಂಬ ಪ್ರತ್ಯೇಕ ಕವಾಟವನ್ನು ಸಿದ್ಧಗೊಳಿಸಲಾಗಿದೆ. ಇತರ ಯಾರಿಗೂ ಅದರೊಳಗೆ ಪ್ರವೇಶವಿಲ್ಲ. ಉಪವಾಸದ ನೈಜ ಗುರಿಯನ್ನು ಅರಿತು ಯಥಾರ್ಥ ಮುತ್ತಕೀಗಳಾಗುವ ಮೂಲಕ ರಯ್ಯಾನ್ ಎಂಬ ಕವಾಟದಲ್ಲಿ ಸ್ವರ್ಗ ಪ್ರವೇಶಿಸಲು ಅಲ್ಲಾಹನು ಅನುಗ್ರಹಿಸಲಿ. ಆಮೀನ್. ■

# ಝಕಾತ್ ಮೂಲಕ ಸಂಪತ್ತನ್ನು ಶುದ್ಧೀಕರಿಸಿರಿ

ಝಕಾತ್ ನೀಡಲು ಹಿಂದೇಟು ಹಾಕುವವರು ಆಯುಧ ಬಲವನ್ನು ಹೊಂದಿದ್ದರೆ ಯುದ್ಧದ ಮೂಲಕವಾದರೂ ಅದನ್ನು ವಶಪಡಿಸಿಕೊಳ್ಳಬೇಕೆಂದು ಪ್ರಮಾಣಗಳು ಹೇಳುತ್ತವೆ.

ಝಕಾತ್ ಇಸ್ಲಾಮಿನ ಪಂಚಸ್ಥಂಭಗಳಲ್ಲೊಂದಾಗಿದೆ. ಇಬ್ನ್ ಉಮರ್(ﷺ) ಅವರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: "ಇಸ್ಲಾಮ್ ಐದು ಕಾರ್ಯಗಳಲ್ಲಿ ಸ್ಥಾಪನೆಗೊಂಡಿದೆ. ಅಲ್ಲಾಹನಲ್ಲದೆ ಆರಾಧನೆಗೆ ಅರ್ಹರಾದವರು ಬೇರೆ ಯಾರೂ ಇಲ್ಲ. ಪ್ರವಾದಿ ಮುಹಮ್ಮದ್(ﷺ) ರು ಅಲ್ಲಾಹನ ಸಂದೇಶವಾಹಕರಾಗಿದ್ದಾರೆ ಎಂಬ ಸಾಕ್ಷ್ಯವಚನ. ನಮಾಝುನ್ನು ಕ್ರಮಪ್ರಕಾರವಾಗಿ ನಿರ್ವಹಿಸುವುದು. ಝಕಾತ್ ನೀಡುವುದು ಉಪವಾಸ ಅನುಷ್ಠಿಸುವುದು ಮತ್ತು ಹಜ್ಜ್ ನಿರ್ವಹಿಸುವುದು." (ಬುಖಾರಿ ಮುಸ್ಲಿಂ)

ಪವಿತ್ರ ಕುರ್‌ಆನಿನ ಹಲವೆಡೆಗಳಲ್ಲಿ ನಮಾಝ್ ಮತ್ತು ಝಕಾತ್ ಒಟ್ಟಾಗಿ ಪ್ರತಿಪಾದಿಸಲ್ಪಟ್ಟಿರುವುದನ್ನು ನೋಡಬಹುದಾಗಿದೆ.

## ಝಕಾತ್ ನೀಡುವುದರ ಪ್ರಾಮುಖ್ಯತೆ:

ಅಲ್ಲಾಹನು ಹೇಳುತ್ತಾನೆ:

﴿خُذْ مِنْ أَمْوَٰلِهِمْ صَدَقَةً تُطَهِّرُهُمْ وَتُزَكِّيهِم بِهَا وَصَلِّ عَلَيْهِمْ﴾

"ಅವರು ಸಂಪತ್ತುಗಳಿಂದ ದಾನಧರ್ಮಗಳನ್ನು ಪಡೆದು ಅವರನ್ನು ಸಂಸ್ಕರಿಸಿ ಶುದ್ಧೀಕರಿಸಿರಿ ಮತ್ತು ಅವರಿಗಾಗಿ ಪ್ರಾರ್ಥಿಸಿರಿ." (ತೌಬ 103)

﴿وَمَآ ءَاتَيْتُم مِّن رِّبًا لِّيَرْبُوَا۟ فِىٓ أَمْوَٰلِ ٱلنَّاسِ فَلَا يَرْبُوا۟ عِندَ ٱللَّهِ ۖ وَمَآ ءَاتَيْتُم مِّن زَكَوٰةٍ تُرِيدُونَ وَجْهَ ٱللَّهِ فَأُو۟لَٰٓئِكَ هُمُ ٱلْمُضْعِفُونَ ﴿٣٩﴾﴾

"ಜನರ ಸೊತ್ತಿನಲ್ಲಿ ಸೇರಿ ವೃದ್ಧಿಯಾಗಬೇಕೆಂದು ನೀವು ಕೊಡುವ ಬಡ್ಡಿಯು ಅಲ್ಲಾಹನ ಬಳಿ ವೃದ್ಧಿಸುವುದಿಲ್ಲ. ನೀವು ಅಲ್ಲಾಹನ ಸಂಪ್ರೀತಿ ಬಯಸಿ ಕೊಡುವ ನೀಡುವವರೇ ವಾಸ್ತವದಲ್ಲಿ ತಮ್ಮ ಸಂಪತ್ತನ್ನು ವೃದ್ಧಿಸಿಕೊಳ್ಳುತ್ತಾರೆ." (30:39)

ಧರ್ಮಸಮ್ಮತವಾದ ಮಾರ್ಗದಲ್ಲಿ ಸಂಪಾದಿಸಿದುದರಿಂದ ಒಂದು ಖರ್ಜೂರವನ್ನಾದರೂ ದಾನ ಮಾಡಿದರೆ ಅದನ್ನು ಅಲ್ಲಾಹನು ತನ್ನ ಬಲಗೈಯಿಂದ ಸ್ವೀಕರಿಸಿ ನೀವು ನಿಮ್ಮ ಕುದುರೆಯ ಮರಿಗಳನ್ನು ಬೆಳೆಸುವಂತೆ ಒಂದು ಬೆಟ್ಟದಷ್ಟು ಹಿಗ್ಗಿಸುತ್ತಾನೆ. (ಬುಖಾರಿ ಮುಸ್ಲಿಂ)

## ಝಕಾತ್ ನೀಡದಿರುವುದರ ಗಂಭೀರತೆ:

﴿وَلَا يَحْسَبَنَّ ٱلَّذِينَ يَبْخَلُونَ بِمَآ ءَاتَىٰهُمُ ٱللَّهُ مِن فَضْلِهِۦ هُوَ خَيْرًا لَّهُم ۖ بَلْ هُوَ شَرٌّ لَّهُمْ ۖ سَيُطَوَّقُونَ

مَا بَخِلُواْ بِهِۦ يَوْمَ ٱلْقِيَـٰمَةِ ۗ وَلِلَّهِ مِيرَٰثُ ٱلسَّمَـٰوَٰتِ
وَٱلْأَرْضِ ۗ وَٱللَّهُ بِمَا تَعْمَلُونَ خَبِيرٌ ﴿١٨٠﴾

“ಅಲ್ಲಾಹನು ತನ್ನ ಅನುಗ್ರಹ ಮಾಡಿದ ಅನಂತರವೂ ಜಿಪುಣತೆ ತೋರಿಸುವವರು ಈ ಲೋಭವು ತಮ್ಮ ಪಾಲಿಗೆ ಶುಭಕರವೆಂದೆನಿಸದಿರಲಿ. ಇದು ಅವರ ಮಟ್ಟಿಗೆ ಅತ್ಯಂತ ಅಶುಭಕರವಾಗಿರುವುದು. ಅವರು ತಮ್ಮ ಜಿಪುಣತೆಯಿಂದ ಸಂಗ್ರಹಿಸಿಡುವ ವಸ್ತುವೇ ಪುನರುತ್ಥಾನ ದಿನದಂದು ಅವರ ಕಂಠ ಕಡಗವಾಗುವುದು. ಭೂಮಿ ಆಕಾಶಗಳ ಅಂತಿಮ ಒಡೆತನ ಅಲ್ಲಾಹನಿಗಾಗಿಯೇ ಇದೆ. ನೀವು ಮಾಡುವುದನ್ನೆಲ್ಲ ಅಲ್ಲಾಹ್ ಬಲ್ಲವನಾಗಿರುತ್ತಾನೆ.” (3:180)

ಅಬೂಹುರೈರಾ(﵁) ಅವರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: “ಒಬ್ಬನಿಗೆ ಅಲ್ಲಾಹನು ಸಂಪತ್ತು ನೀಡಿದ್ದರೂ ಅವನು ಅದರ ಝಕಾತ್ ನೀಡದಿದ್ದರೆ ಅಂತ್ಯದಿನದಲ್ಲಿ ಆ ಸಂಪತ್ತು ಒಂದು ಸರ್ಪವಾಗಿ ಮಾರ್ಪಟ್ಟು ಅವನ ತಲೆಗೆ ಸುತ್ತು ಹಾಕಿ ಕೆನ್ನೆಯನ್ನು ಚುಚ್ಚುತ್ತಾ ನೀನು ಕೂಡಿಟ್ಟ ಸಂಪತ್ತು ನಾನೇ ಆಗಿರುವೆನು ಎಂದು ಹೇಳುವುದು.” ಅನಂತರ ಪ್ರವಾದಿ(ﷺ) ಯವರು ಮೇಲಿನ ಆಯತ್ತನ್ನು ಪಠಿಸಿದರು. (ಬುಖಾರಿ)

﴿وَٱلَّذِينَ يَكْنِزُونَ ٱلذَّهَبَ وَٱلْفِضَّةَ
وَلَا يُنفِقُونَهَا فِى سَبِيلِ ٱللَّهِ فَبَشِّرْهُم
بِعَذَابٍ أَلِيمٍ ﴿٣٤﴾ يَوْمَ يُحْمَىٰ عَلَيْهَا فِى نَارِ
جَهَنَّمَ فَتُكْوَىٰ بِهَا جِبَاهُهُمْ وَجُنُوبُهُمْ
وَظُهُورُهُمْ ۖ هَـٰذَا مَا كَنَزْتُمْ لِأَنفُسِكُمْ
فَذُوقُواْ مَا كُنتُمْ تَكْنِزُونَ ﴿٣٥﴾

“ಚಿನ್ನವನ್ನೂ ಬೆಳ್ಳಿಯನ್ನೂ ಸಂಗ್ರಹಿಸಿಟ್ಟು ಅವುಗಳನ್ನು ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡದವರಿಗೆ ವೇದನಾಜನಕ ಯಾತನೆಯ ಸುವಾರ್ತೆಯನ್ನು ನೀಡಿರಿ. ಈ ಚಿನ್ನ ಬೆಳ್ಳಿಗಳ ಮೇಲೆ ನರಕಾಗ್ನಿಯನ್ನು ಉರಿಸಲಾಗುವುದು. ತರುವಾಯ ಅದರಿಂದಲೇ ಅವರ ಹಣೆಗಳಿಗೂ ಪಾರ್ಶ್ವಗಳಿಗೂ ಬೆನ್ನುಗಳಿಗೂ ಬರೆ ಹಾಕಲಾಗುವುದು. ನೀವು ನಿಮಗಾಗಿ ಸಂಗ್ರಹಿಸಿಟ್ಟಿದ್ದ ಸಂಪತ್ತು ಇದುವೇ. ಈಗ ನೀವು ಕೂಡಿಟ್ಟ ಸಂಪತ್ತನ್ನು ಸವಿಯಿರಿ ಎನ್ನಲಾಗುವುದು.” (ಅತ್ತೌಬ 34-35)

ಅಬೂಹುರೈರಾ(﵁) ಅವರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: “ಚಿನ್ನ ಮತ್ತು ಬೆಳ್ಳಿಯ ಒಡೆಯರು ಅದರಿಂದ ಅರ್ಹವಾದ ಝಕಾತ್ ನೀಡದಿದ್ದರೆ ಅಂತ್ಯದಿನದಲ್ಲಿ ಪ್ರಸ್ತುತ ಸಂಪತ್ತುಗಳನ್ನು ತಗಡುಗಳನ್ನಾಗಿ ಪರಿವರ್ತಿಸಿ ಅವುಗಳನ್ನು ಉರಿಸಿದ ನಂತರ ಅವರ ಬೆನ್ನುಗಳಿಗೂ ಹಣೆಗಳಿಗೂ ಬರೆ ಹಾಕಲಾಗುವುದು. ಅದು ತಣ್ಣಗಾಗುವಾಗ ಪುನಃ ಬಿಸಿಯಾಗುವ ಪ್ರಕ್ರಿಯೆ ಪುನರಾವರ್ತಿಸಲ್ಪಡುವುದು. ಎಪ್ಪತ್ತು ಸಾವಿರ ವರ್ಷ ದೀರ್ಘವಾಗಿರುವ ಒಂದು ದಿನದಲ್ಲಿ ಅಲ್ಲಾಹನು ತನ್ನ ದಾಸರ ಮಧ್ಯೆ ತೀರ್ಪು ನೀಡುವ ತನಕ ಅದು ಮುಂದುವರಿಯುವುದು. ಕೊನೆಗೆ ವಿಚಾರಣೆಯ ನಂತರ ಅವರು ಸ್ವರ್ಗಕ್ಕೋ ನರಕಕ್ಕೋ ಕೊಂಡೊಯ್ಯಲ್ಪಡುತ್ತಾರೆ.”

ಅದನ್ನು ಆಲಿಸಿ ಒಬ್ಬರು ಪ್ರವಾದಿ(ﷺ) ಯವರೊಂದಿಗೆ ಕೇಳುತ್ತಾರೆ. “ಅವನ ಸಂಪತ್ತು ಒಂಟೆಯಾಗಿದ್ದರೆ?” ಪ್ರವಾದಿ(ﷺ) ಯವರು ಹೇಳುತ್ತಾರೆ: “ಒಂಟೆಯಾಗಿದ್ದರೂ ಸರಿ. ನೀರು ನೀಡುವ ದಿನ ಅದನ್ನು ಕರೆಯುವುದು ಅದರೊಂದಿಗಿರುವ ಬಾಧ್ಯತೆಯಲ್ಲಿ ಒಳಪಡುತ್ತದೆ. ಅದನ್ನು ಅವರು ನಿರ್ವಹಿಸದಿದ್ದರೆ ಅವುಗಳಿಗೆ ವಿಶಾಲವಾದ ಮತ್ತು ಸಮತಟ್ಟಾದ ಒಂದು ಮೈದಾನವನ್ನು ಬಿಟ್ಟುಕೊಟ್ಟು ಅದರಲ್ಲಿ ಒಂದು ಒಂಟೆ ಮರಿಯೂ ಕಡಿಮೆಯಿಲ್ಲದಂತೆ ತುಂಬಿ ಅದರ ಗೊರಸಿನಿಂದ ಆ ವ್ಯಕ್ತಿಯನ್ನು ತುಳಿದು ಪರಚುವುದು. ಒಂಟೆಗಳೆಲ್ಲವೂ ದಾಟಿದ ಮೇಲೆ ಅದರ ಆದಿಯು ಪುನಃ ಮರಳಿ ಬರುವುದು. ಐವತ್ತು ಸಾವಿರ ವರ್ಷ ದೀರ್ಘವಾಗಿರುವ ಒಂದು ದಿನದಲ್ಲಿ ಆ ಪ್ರಕ್ರಿಯೆ ಪುನರಾವರ್ತಿಸಲ್ಪಡುವುದು. ವಿಚಾರಣೆಯ ನಂತರ ಅವರು ಸ್ವರ್ಗಕ್ಕೋ ನರಕಕ್ಕೋ ಸಾಗಿಸಲ್ಪಡುತ್ತಾರೆ.” (ಮುಸ್ಲಿಂ ಅಬೂದಾವೂದ್)

## ಝಕಾತ್ ನೀಡದಿರುವುದರ ವಿಧಿ:

ಅರ್ಹತೆಯಿರುವವರು ಝಕಾತ್ ನೀಡುವುದು ಕಡ್ಡಾಯವಾಗಿದೆ. ಝಕಾತ್ ಕಡ್ಡಾಯವಿಲ್ಲವೆಂದು ಹೇಳುವವನು ಇಸ್ಲಾಮಿನಿಂದ ಪಥಭ್ರಷ್ಟನಾಗಿದ್ದಾನೆಂದೂ ಕೂಡಾ ಪರಿಗಣಿಸಲ್ಪಡುತ್ತಾನೆ. ಆದರೆ ಝಕಾತ್ ಕಡ್ಡಾಯವೆಂದು ವಿಶ್ವಾಸವಿರಿಸಿ ಅದನ್ನು ನೀಡದಿರುವವನು ಇಸ್ಲಾಮಿನಿಂದ ಪಥಭ್ರಷ್ಟನಾಗುವುದಿಲ್ಲ. ಅಂಥವರ ಸಂಪತ್ತಿನಿಂದ ಬಲಪ್ರಯೋಗದ ಮೂಲಕ ಝಕಾತ್ ವಸೂಲಿ ಮಾಡುವುದು ಇಸ್ಲಾಮಿಕ್ ಆಡಳಿತಗಾರರ ಭಾಧ್ಯತೆಯಾಗಿದೆ. ಹಾಗೆ ಮಾಡುವಾಗ ಶಿಕ್ಷೆಯೆಂಬ ನೆಲೆಯಲ್ಲಿ ಅವನ ಸಂಪತ್ತಿನ ಅರ್ಧಾಂಶ ವಶಪಡಿಸಿಕೊಳ್ಳಬಹುದಾಗಿದೆ.

ಬಹಸ್ ಬಿನ್ ಹಕೀಮ್ ತನ್ನ ತಂದೆಯವರಿಂದ ಅವರು ಪ್ರವಾದಿ

(ﷺ) ಯವರಿಂದ ಉಲ್ಲೇಖಿಸುತ್ತಾರೆ. "ಮೇಯುವ ಒಂಟೆಗಳ ಸಂಖ್ಯೆ 40ಕ್ಕೆ ತಲುಪಿದಾಗ ಅದರಿಂದ ಎರಡು ವರ್ಷ ಪ್ರಾಯಕ್ಕೆ ಪ್ರವೇಶಿಸಿದ ಒಂದು ಒಂಟೆಯ ಮರಿಯನ್ನು ಝಕಾತಾಗಿ ನೀಡಬೇಕು. ಒಂಟೆಗಳನ್ನು ಲೆಕ್ಕಾಚಾರದಿಂದ ಬೇರ್ಪಡಿಸಬಾರದು. ಅಲ್ಲಾಹನ ಸಂಪ್ರೀತಿಯನ್ನು ಬಯಸಿ ಒಬ್ಬನು ಅದನ್ನು ನೀಡಿದರೆ ಅದರ ಪ್ರತಿಫಲವಿದೆ. ಒಬ್ಬನು ಅದನ್ನು ನೀಡಲು ನಿರಾಕರಿಸಿದರೆ ನಾವು ಅದನ್ನು ವಸೂಲು ಮಾಡಬೇಕಲ್ಲದೆ ದಂಡವೆಂಬ ನೆಲೆಯಲ್ಲಿ ಅವನ ಅರ್ಧದಷ್ಟು ಸಂಪತ್ತನ್ನೂ ವಶಪಡಿಸಿಕೊಳ್ಳಬೇಕು. ಮುಹಮ್ಮದ್(ﷺ) ಮತ್ತು ಅವರ ಕುಟುಂಬಕ್ಕೆ ಅದರಲ್ಲಿ ಯಾವುದೇ ಪಾಲಿಲ್ಲ." (ಅಬೂದಾವೂದ್)

ಝಕಾತ್ ನೀಡಲು ಹಿಂದೇಟು ಹಾಕುವವರು ಆಯುಧ ಬಲವನ್ನು ಹೊಂದಿದ್ದರೆ ಯುದ್ಧದ ಮೂಲಕವಾದರೂ ಅದನ್ನು ವಶಪಡಿಸಿಕೊಳ್ಳಬೇಕೆಂದು ಪ್ರಮಾಣಗಳು ಹೇಳುತ್ತವೆ.

ಪ್ರವಾದಿ(ﷺ) ಯವರು ಹೇಳುತ್ತಾರೆ: "ಜನರು ತೌಹೀದ್ ಅಂಗೀಕರಿಸುವ, ನಮಾಝ್ ನಿರ್ವಹಿಸುವ ಹಾಗೂ ಝಕಾತ್ ನೀಡುವ ತನಕ ಅವರೊಂದಿಗೆ ಯುದ್ಧ ಮಾಡಲು ನನಗೆ ಆದೇಶಿಸಲ್ಪಟ್ಟಿದೆ. ಅವರು ಅಷ್ಟು ನಿರ್ವಹಿಸಲು ಸಿದ್ಧರಾದರೆ ಅವರ ಸೊತ್ತು ಮತ್ತು ಶರೀರ ಪರಿಶುದ್ಧವಾಗಿದೆಯೆಂದು ಪರಿಗಣಿಸಲ್ಪಡುತ್ತದೆ. ಇಸ್ಲಾಮ್ ಅನುಮತಿಸಿದ ಕಾರಣವನ್ನು ಹೊರತುಪಡಿಸಿ ಅವರ ವಿರುದ್ಧ ಯಾವುದೇ ವಿಧದ ಬಲವಂತ ಉಂಟಾಗುವುದಿಲ್ಲ. ಆದರೆ ಅವರನ್ನು (ಅವರ ಮಾನಸಿಕ ನಿಲುವಿಗನುಸಾರ) ವಿಚಾರಣೆ ನಡೆಸುವುದು ಹಾಗೂ ಶಿಕ್ಷಾ—ರಕ್ಷಾ ಕ್ರಮಗಳನ್ನು ಜರುಗಿಸುವವನು ಅಲ್ಲಾಹನಾಗಿರುತ್ತಾನೆ." (ಬುಖಾರಿ ಮುಸ್ಲಿಂ)

ಅಬೂಹುರೈರಾ(ರ) ಅವರಿಂದ ನಿವೇದನೆ: ಪ್ರವಾದಿ(ﷺ) ಯವರು ವಫಾತಾಗಿ ಅಬೂಬಕ್ಕರ್(ರ) ರವರು ಆಡಳಿತವನ್ನು ವಹಿಸಿಕೊಂಡಾಗ ಅರಬಿಗಳಲ್ಲಿ ಕೆಲವರು ಧರ್ಮತ್ಯಾಗಿಗಳಾಗಿ ಮಾರ್ಪಟ್ಟರು. (ಅಬೂಬಕ್ಕರ್ ಅವರೊಂದಿಗೆ ಯುದ್ಧ ಮಾಡುವ ಸಿದ್ಧತೆಯಲ್ಲಿ ತೊಡಗಿಕೊಂಡರು.) ಉಮರ್(ರ) ರವರು ಈ ನಿಲುವನ್ನು ಪ್ರಶ್ನಿಸಿ ತೌಹೀದ್ ಅಂಗೀಕರಿಸಿದವರೊಂದಿಗೆ ಯುದ್ಧ ಮಾಡಬಾರದೆಂದು ಪ್ರವಾದಿ(ﷺ) ಯವರು ಹೇಳಿರುವಾಗ ನೀವು ಅದು ಹೇಗೆ ಯುದ್ಧ ಮಾಡುತ್ತೀರಿ ಎಂದು ಕೇಳುತ್ತಾರೆ.

ಆಗ ಅಬೂಬಕ್ಕರ್(ರ) ಹೇಳುತ್ತಾರೆ: "ಅಲ್ಲಾಹನಾಣೆಗೂ ಸತ್ಯ. ನಮಾಝ್ ಮತ್ತು ಝಕಾತನ್ನು ಬೇರ್ಪಡಿಸುವವರೊಂದಿಗೆ ನಾನು ಖಂಡಿತವಾಗಿಯೂ ಯುದ್ಧ ಮಾಡುತ್ತೇನೆ. ಅವರು ಪ್ರವಾದಿ(ﷺ) ಯವರ ಕಾಲದಲ್ಲಿ ಒಂದು ಒಂಟೆಯ ಮರಿಯನ್ನು ನೀಡಿದ್ದರೂ ಅದನ್ನು ಕೊಡುವ ತನಕ ನಾನು ಅವರೊಂದಿಗೆ ಹೋರಾಡುತ್ತೇನೆ. ಏಕೆಂದರೆ ದೇಹದ ಮೇಲೆ ನಮಾಝ್ ಬಾಧ್ಯತೆಯಾದಂತೆ ಸಂಪತ್ತಿನ ಮೇಲೆ ಝಕಾತ್ ನೀಡುವುದು ಬಾಧ್ಯತೆಯಾಗಿದೆ." ಇದರೊಂದಿಗೆ ನನಗೂ ಅಬೂಬಕ್ಕರ್(ರ) ರವರಂತೆ ವಿಷಯವು ಸರಿಯಾಗಿದೆಯೆಂದು ಮನವರಿಕೆಯಾಯಿತು. (ಬುಖಾರಿ ಮುಸ್ಲಿಂ) ■

---

*27 ನೇ ಪುಟದಿಂದ*

## ಉಪವಾಸದ ಕರ್ಮಶಾಸ್ತ್ರ

ಉಪವಾಸಿಗರಾಗಿದ್ದಾಗ ತಮ್ಮ ಪತ್ನಿಯರನ್ನು ಚುಂಬಿಸುತ್ತಿದ್ದರು. ಆದರೆ ಅವರು ಭಾವನೆಗಳನ್ನು ನಿಯಂತ್ರಿಸುವುದರಲ್ಲಿ ಎಲ್ಲರಿಗಿಂತ ಮಿಗಿಲಾಗಿದ್ದರು. (ಬುಖಾರಿ ಮುಸ್ಲಿಂ)

4. ಪ್ರಭಾತದ ತನಕ ಜನಾಬತ್‌ಗಾರನಾಗಿರುವುದು.

ಉಮ್ಮು ಸಲಮ(ರ) ರವರು ಆಯಿಶಾ(ರ) ರಿಂದ ನಿವೇದಿಸುತ್ತಾರೆ: "ಪ್ರವಾದಿ(ﷺ) ಯವರು ಉಪವಾಸದ ಕಾಲದಲ್ಲಿ ತಮ್ಮ ಪತ್ನಿಯರೊಂದಿಗೆ ಸಂಸರ್ಗ ನಡೆಸಿದ ಕಾರಣದಿಂದ ಫಜ್ರ್ ತನಕ ದೊಡ್ಡ ಅಶುದ್ಧಿಯಲ್ಲಿರುತ್ತಿದ್ದರು. ಅನಂತರ ಸ್ನಾನ ಮಾಡಿ ಉಪವಾಸ ಆಚರಿಸುತ್ತಿದ್ದರು." (ಬುಖಾರಿ ಮುಸ್ಲಿಂ)

5. ಹಲ್ಲುಜ್ಜುವುದು, ಪರಿಮಳ ದ್ರವ್ಯಗಳ ಉಪಯೋಗ, ಎಣ್ಣೆ ಹಚ್ಚುವುದು, ಕಣ್ಣಿಗೆ ಹನಿಯ ಔಷಧ ಹಾಕುವುದು, ಮುಂತಾದವುಗಳೆಲ್ಲ ಇಸ್ಲಾಮಿನ ಮೂಲಭೂತ ನಿಯಮ ಪ್ರಕಾರ ಅನುವದನೀಯವಾಗಿದೆ. ಯಾವುದಾದರೂ ನಿಷಿದ್ಧವಿರುತ್ತಿದ್ದರೆ ಪ್ರವಾದಿ(ﷺ) ಯವರು ಅದನ್ನು ಬಿಟ್ಟುಬಿಡುತ್ತಿದ್ದರು.

ಅಲ್ಲಾಹನು ಹೇಳುತ್ತಾನೆ:




"ನಿಮ್ಮ ಪ್ರಭು ಮರೆತು ಬಿಡುವವನಲ್ಲ." (19:64) ■

# ಕುರ್‌ಆನ್ ಪಾರಾಯಣದ ಶಿಷ್ಟಾಚಾರ

ಬೇರೆ ಉದ್ದೇಶವನ್ನಿಟ್ಟುಕೊಂಡು ಕುರ್‌ಆನ್ ಪಾರಾಯಣ ಮಾಡುವುದು ನಿಷಿದ್ಧವಾಗಿದೆ. ಇತರರಿಂದ ಕೂಲಿ ಪಡೆಯಲು ಅಥವಾ ಚೆನ್ನಾಗಿ ಪಾರಾಯಣ ಮಾಡುವವನು ಎಂಬ ಪ್ರಶಂಸೆ ಗಿಟ್ಟಿಸುವ ಏಕಮಾತ್ರ ಉದ್ದೇಶದಿಂದ ಪಾರಾಯಣ ಮಾಡಬಾರದು.

ಪವಿತ್ರ ಕುರ್‌ಆನ್ ಮಧುರವಾಗಿದೆ. ಸತ್ಯವಿಶ್ವಾಸಿಗಳ ಜಗತ್ತಿನ ಆಧ್ಯಾತ್ಮಿಕ ಸ್ಫೂರ್ತಿ ಸರ್ವಶಕ್ತನ ಮಾತುಗಳು. ಪಾರಾಯಣ ಮಾಡುವವರ ಪದವಿಗಳು ಔನ್ನತ್ಯಕ್ಕೇರುವ ಅದ್ಭುತ ಗ್ರಂಥ. ಕೆಡುಕಿನ ವಕ್ತಾರರಾಗಿ ಜೀವಿಸಿದ್ದ ಜನಸಮುದಾಯವನ್ನು ಒಳಿತಿನ ಪ್ರತೀಕಗಳಾಗಿ ಮಾರ್ಪಡಿಸಿದ ವಿಸ್ಮಯಕಾರಿ ಗ್ರಂಥ. ಶತಮಾನಗಳ ಸವಾಲುಗಳನ್ನು ಮೆಟ್ಟಿನಿಂತು ನಿತ್ಯನೂತನವಾಗಿ ನೆಲೆಗೊಂಡಿರುವ ದೈವಿಕ ಗ್ರಂಥ. ಯಾರನ್ನಾದರೂ ಆಕರ್ಷಿಸುವ ಸಾಹಿತ್ಯ ಶೈಲಿ. ಅತುಲ್ಯವಾದ ವಾಕ್ಯರಚನೆ. ಅದರ ಪ್ರತಿಯೊಂದು ಅಕ್ಷರವನ್ನು ಉಚ್ಛರಿಸಿದಾಗ ಪ್ರತಿಫಲವು ದಾಖಲಿಸಲ್ಪಡುತ್ತದೆ. ಅದುವೇ ಪವಿತ್ರ, ಪರಿಶುದ್ಧ, ಪಾವನ, ಮಹೋನ್ನತ ಕುರ್‌ಆನ್. ಮಾನವನ ಜೀವನಕ್ಕೆ ಮಿತಿಮೇರೆಗಳು, ಶಿಸ್ತು, ವಿಧಿ-ನಿಷೇಧಗಳನ್ನು ತೋರಿಸಿಕೊಡು ಜೊತೆಗೆ ಸತ್ಯವಿಶ್ವಾಸಿಗಳ ಹೃದಯದಲ್ಲಿ ಮರಣ, ಪರಲೋಕ, ಸ್ವರ್ಗ, ನರಕ ಮುಂತಾದವುಗಳ ಕುರಿತು ಪ್ರಜ್ಞೆಯನ್ನು ಬೇರೂರಿಸುವಂತಹ ಅತ್ಯುತ್ತಮ ಗ್ರಂಥ.

ಸತ್ಯವಿಶ್ವಾಸಿಗಳ ಮಟ್ಟಿಗೆ ಅವರಿಗೆ ಕುರ್‌ಆನಿನೊಂದಿಗಿರುವ ಸಂಬಂಧವು ಇತರ ಗ್ರಂಥಗಳೊಂದಿಗಿರುವ ಸಂಬಂಧದಂತ-ಲ್ಲ. ಒಬ್ಬರ ಮಾತುಗಳಿಗೆ ಬೆಲೆ ನೀಡುವುದು ಆ ವ್ಯಕ್ತಿಯನ್ನು ಗೌರವಿಸುವ ಮತ್ತು ಆದರಿಸುವ ಭಾಗವಾಗಿದೆ. ಹಾಗಿರುವಾಗ ಪ್ರಪಂಚದ ಸೃಷ್ಟಿಕರ್ತನ ಮಾತುಗಳನ್ನು ನಾವು ಅದೆಷ್ಟು ಗಂಭೀರವಾಗಿ ಪರಿಗಣಿಸಬೇಕು.

ಪ್ರವಾದಿ ನೂಹ್(ﷺ) ತಮ್ಮ ಜನತೆಯೊಂದಿಗೆ ಪ್ರಶ್ನಿ-ಸಿದ್ದು ಗಮನಾರ್ಹವಾಗಿದೆ.



“ನೀವು ಅಲ್ಲಾಹನ ಬಗ್ಗೆ ಯಾವುದೇ ಪ್ರತಿಷ್ಠೆಯನ್ನು ನಿರೀಕ್ಷಿಸದಿರಲು ನಿಮಗೇನಾಗಿದೆ?” (71:13)

ಕುರ್‌ಆನಿನ ಪಾರಾಯಣ ಬಹಳ ಆದರ ಮತ್ತು ಗೌರವದೊಂದಿಗೆ ಕೂಡಿರಬೇಕು. ಅದು ಕೇವಲ ಮನುಷ್ಯನ ರಚನೆಯನ್ನು ಓದುವಂತಹ ರೀತಿಯಲ್ಲಾಗಬಾರದು. ಈ ವಿಷಯಕ್ಕೆ ಸಂಬಂಧಪ-ಟ್ಟಂತೆ ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಹಲವಾರು ಶಿಷ್ಟಾಚಾರಗಳು ಸೂಚಿತವಾಗಿರುವುದನ್ನು ನಾವು ನೋಡಬಹುದಾಗಿದೆ.

1. ಕುರ್‌ಆನ್ ಪಾರಾಯಣಕ್ಕಿಂತ ಮೊದಲು ಅಲ್ಲಾಹ-ನೊಡನೆ ಅಭಯಕೋರಬೇಕು.

ಅಲ್ಲಾಹನು ಹೇಳುತ್ತಾನೆ:





“ನೀವು ಕುರ್‌ಆನನ್ನು ಪಠಿಸಲಾರಂಭಿಸುವಾಗ ಶಪಿತ ಶೈತಾನನಿಂದ ಅಲ್ಲಾಹನಲ್ಲಿ ಅಭಯ ಯಾಚಿಸಿ-ಕೊಳ್ಳಿರಿ.” (16:98)

أَعُوذُ بِاللَّهِ مِنَ الشَّيْطَانِ الرَّجِيمِ

ಎಂದೋ

أَعُوذُ بِاللَّهِ السَّمِيعِ الْعَلِيمِ مِنَ الشَّيْطَانِ الرَّجِيمِ

ಎಂದೋ ಹೇಳಬಹುದಾಗಿದೆ.

2. ಪ್ರತಿಯೊಂದು ಅಧ್ಯಾಯವನ್ನು ಆರಂಭಿಸುವಾಗ ಬಿಸ್ಮಿ ಹೇಳಬೇಕು.

3. ಕುರ್‌ಆನ್ ಪಾರಾಯಣ ಮಾಡುವುದನ್ನು ಆಲಿಸಿದಾಗ ಮೌನ ಪಾಲಿಸಬೇಕು.

﴿ وَإِذَا قُرِئَ ٱلْقُرْءَانُ فَٱسْتَمِعُوا۟ لَهُۥ وَأَنصِتُوا۟ لَعَلَّكُمْ تُرْحَمُونَ ﴿٢٠٤﴾ ﴾

“ನಿಮ್ಮ ಮುಂದೆ ಕುರ್‌ಆನ್ ಓದಿದಾಗ ಅದನ್ನು ಗಮನವಿಟ್ಟು ಕೇಳಿರಿ ಮತ್ತು ಮೌನವಾಗಿರಿ. ನೀವು ಅನುಗ್ರಹೀತರಾಗ-ಲೂಬಹುದು.” (7:204)

ಕುರ್‌ಆನ್ ಪಾರಾಯಣ ಮಾಡುತ್ತಿರುವ ಸ್ಥಳಗಳಲ್ಲಿ ಗೌಜು—ಗದ್ದಲಗಳನ್ನು ಸೃಷ್ಟಿಸುವುದು ಬಹುದೇವವಿ-ಶ್ವಾಸಿಗಳ ಲಕ್ಷಣವಾಗಿದೆ.

ಅಲ್ಲಾಹನು ಹೇಳುತ್ತಾನೆ:

﴿ وَقَالَ ٱلَّذِينَ كَفَرُوا۟ لَا تَسْمَعُوا۟ لِهَٰذَا ٱلْقُرْءَانِ وَٱلْغَوْا۟ فِيهِ لَعَلَّكُمْ تَغْلِبُونَ ﴿٢٦﴾ ﴾

“ಈ ಕುರ್‌ಆನನ್ನು ಎಷ್ಟು ಮಾತ್ರಕ್ಕೂ ಆಲಿಸಬೇಡಿರಿ. ಇದನ್ನು ಕೇಳಿಸಲಾದಾಗ ಆತಂಕಗಳನ್ನೊಡ್ಡಿರಿ. ಈ ಮೂಲಕ ನೀವು ವಿಜಯಿಗಳಾಗಲೂಬಹುದು ಎಂದು ಸತ್ಯನಿಷೇಧಿಗಳು ಹೇಳುತ್ತಾರೆ.” (41:26)

4. ಕುರ್‌ಆನ್ ಪಾರಾಯಣ ಮಾಡುವ ವ್ಯಕ್ತಿ ತನ್ನ ಧ್ವನಿಯನ್ನು ಉತ್ತಮಪಡಿಸಿಕೊಳ್ಳಬೇಕು. ಅದರ ಜೊತೆಗೆ ತನ್ನ ಪಾರಾಯಣ ಶೈಲಿಯೂ ಆಕರ್ಷಕವಾಗಲು ಸಾಧ್ಯವಾದಷ್ಟು ಮಟ್ಟಿಗೆ ಪ್ರಯ-ತ್ನಿಸಬೇಕು. ಆದರೆ ನಿಷಿದ್ಧವಾದ ಮ್ಯೂಸಿಕ್‌ಗಳಂತವುಗಳನ್ನು ಉಪಯೋಗಿಸಿ ಕುರ್‌ಆನ್ ಪಾರಾಯಣ ಮಾಡಬಾರದು.

5. ಕುರ್‌ಆನ್ ಪಾರಾಯಣ ಮಾಡುವಾಗ ಆಯತ್‌ಗಳ ಅರ್ಥ ಮತ್ತು ಉದ್ದೇಶವನ್ನು ಅರಿತುಕೊಂಡು ಅದರ ಬಗ್ಗೆ ಚಿಂತಿಸಬೇಕು.

ಅಲ್ಲಾಹನು ಹೇಳುತ್ತಾನೆ:

﴿ أَفَلَا يَتَدَبَّرُونَ ٱلْقُرْءَانَ أَمْ عَلَىٰ قُلُوبٍ أَقْفَالُهَآ ﴿٢٤﴾ ﴾

“ಅವರು ಈ ಕುರ್‌ಆನಿನ ಬಗ್ಗೆ ಚಿಂತನೆ ನಡೆಸಲಿಲ್ಲವೇ? ಅಥವಾ ಅವರ ಹೃದಯಗಳಿಗೆ ಬೀಗಮುದ್ರೆ ಬಿದ್ದಿದೆಯೇ?” (47:24)

6. ಕುರ್‌ಆನ್ ಪಾರಾಯಣ ಮಾಡುವ ವ್ಯಕ್ತಿ ಕುರ್‌ಆನ್ ಆಶಯಗಳಿಗೆ ವಿರುದ್ಧವಾಗಿ ಬದುಕುವುದರ ಕುರಿತು ತುಂಬಾ ಜಾಗರೂಕನಾಗಿರಬೇಕು. ಕುರ್‌ಆನಿನ ಆದೇಶಗಳನ್ನು ಗರಿಷ್ಠ ಮಟ್ಟದಲ್ಲಿ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸ-ಬೇಕು. ಅನ್ಯಥಾ ಅವನು ಕುರ್‌ಆನನ್ನು ಅವಗಣಿಸುವವರ ಜೊತೆಯಲ್ಲಿ ಸೇರುವನು.

ಅಲ್ಲಾಹನು ಹೇಳುತ್ತಾನೆ:

﴿ وَقَالَ ٱلرَّسُولُ يَٰرَبِّ إِنَّ قَوْمِى ٱتَّخَذُوا۟ هَٰذَا ٱلْقُرْءَانَ مَهْجُورًا ﴿٣٠﴾ ﴾

“(ಅಂದು) ಪ್ರವಾದಿಗಳು ಹೇಳುತ್ತಾರೆ: ನನ್ನ ಪ್ರಭೂ ನನ್ನ ಜನಾಂಗದವರು ಈ ಕುರ್‌ಆನನ್ನು ಅಪಹಾಸ್ಯಕ್ಕೆ

*44 ನೇ ಪುಟಕ್ಕೆ*

# ರಮದಾನ್—ಸಲಫುಗಳ ಮಾದರಿ

ಇಮಾಮ್ ಮಾಲಿಕ್, ಸುಫ್ಯಾನುಸ್ಸೌರಿ ಯಂಥವರು ರಮದಾನಿನಲ್ಲಿ ಇತರ ಎಲ್ಲಾ ಚರ್ಚೆಗಳನ್ನು ಬದಿಗಿಟ್ಟು ಕುರ್‌ಆನ್ ಪಾರಾಯಣದಲ್ಲಿ ನಿರತರಾಗುತ್ತಿದ್ದರು. ಅವರು ಕಂಠಪಾಠ ಪಾರಾಯಣ ಮಾಡುವುದಕ್ಕಿಂತ ಗ್ರಂಥವನ್ನು ನೋಡಿಯೇ ಪಾರಾಯಣ ಮಾಡಲು ಪ್ರತ್ಯೇಕ ಆಸ್ಥೆ ವಹಿಸುತ್ತಿದ್ದರು. ಏಕೆಂದರೆ ನೋಡಿ ಓದಿದರೆ ಕಣ್ಣುಗಳು ಕೂಡ ಆ ಪುಣ್ಯದಲ್ಲಿ ಪಾಲ್ಗೊಳ್ಳುತ್ತಿತ್ತು.

ಪವಿತ್ರ ರಮದಾನ್ ಮಹತ್ತರವಾದ ಪಾವನ ತಿಂಗಳಾಗಿದೆ. ಕುರ್‌ಆನ್ ಸೇರಿದಂತೆ ಹಲವು ದೈವಿಕ ಗ್ರಂಥಗಳು ಅವತೀರ್ಣಗೊಂಡದ್ದು ರಮದಾನಿನಲ್ಲಾಗಿದೆ.

ವಾಥಿಲ(﵁) ಪ್ರವಾದಿ(ﷺ) ಯವರಿಂದ ಉಲ್ಲೇಖಿಸುತ್ತಾರೆ. "ಪ್ರವಾದಿ ಇಬ್ರಾಹೀಮರಿಗೆ ಗ್ರಂಥಗಳು ಅವತೀರ್ಣಗೊಂಡಿರುವುದು ರಮದಾನಿನ ಮೊದಲ ರಾತ್ರಿಯಲ್ಲಾಗಿದೆ. ಈ ತಿಂಗಳ ಆರು ದಿನಗಳ ಬಳಿಕ ತೌರಾತ್ ಅವತೀರ್ಣಗೊಳಿಸಲ್ಪಟ್ಟಿತು. ಇಂಜೀಲ್ ರಮದಾನಿನ ಹದಿಮೂರು ರಾತ್ರಿಗಳ ನಂತರ ಅವತೀರ್ಣಗೊಂಡಿತು. ಝಬೂರ್ ರಮದಾನಿನ ಹದಿನೆಂಟು ದಿನಗಳು ಕಳೆದ ಬಳಿಕ ಅವತೀರ್ಣಗೊಳಿಸಲ್ಪಟ್ಟಿತು. ಕುರ್‌ಆನ್ ರಮದಾನಿನ 24 ರಾತ್ರಿಗಳ ನಂತರ ಅವತೀರ್ಣಗೊಂಡಿತು." (ಇಮಾಮ್ ಅಹ್ಮದ್ ತಮ್ಮ ಮುಸ್ನದ್‌ನಲ್ಲೂ ಅಲ್ಬಾನಿ ಸಿಲ್ಸಿಲ ಅಸ್ಸಹೀಹ್‌ನಲ್ಲೂ ಉಲ್ಲೇಖಿಸಿದ್ದಾರೆ.)

ಸತ್ಯವಿಶ್ವಾಸಿಗಳು ತಮ್ಮಿಂದ ಏನಾದರೂ ಪಾಪಗಳು ಅಥವಾ ತಪ್ಪುಗಳು ಸಂಭವಿಸಿದರೆ ಪಶ್ಚಾತ್ತಾಪಪಟ್ಟು ಅಲ್ಲಾಹನೆಡೆಗೆ ಮರಳುವವರಾಗಿದ್ದಾರೆ. ಕರುಣಾನಿಧಿಯಾದ ಅಲ್ಲಾಹನು ಅದಕ್ಕಾಗಿ ಹಲವಾರು ಅವಕಾಶ ಮತ್ತು ಪ್ರೋತ್ಸಾಹವನ್ನು ನೀಡಿದ್ದಾನೆ. ವಿಶೇಷತಃ ರಮದಾನ್ ಅದಕ್ಕಿರುವ ಸುವರ್ಣಾವಕಾಶವಾಗಿದೆ.

ಅದೇ ಪ್ರಕಾರ ರಮದಾನಿನಲ್ಲಿ ನರಕದ ಕವಾಟಗಳು ಮುಚ್ಚಲ್ಪಟ್ಟು ಸ್ವರ್ಗದ ಕವಾಟಗಳು ತೆರೆಯಲ್ಪಡುತ್ತದೆ. ಹಾಗೂ ಮಲಕ್‌ಗಳು ಒಳಿತಿನೆಡೆಗೆ ಆಮಂತ್ರಿಸುವ ವಿಶೇಷ ದಿನರಾತ್ರಿಗಳಿವೆ. ನರಕ ವಿಮೋಚನೆ ಹಾಗೂ ಸ್ವರ್ಗ ಪ್ರವೇಶವನ್ನು ಸಾಧ್ಯಗೊಳಿಸುವ ಮಹತ್ತರವಾದ ರಾತ್ರಿಗಳು ರಮದಾನಿನಲ್ಲಿ ಸಾವಿರ ತಿಂಗಳುಗಳಿಗಿಂತಲೂ ಶ್ರೇಷ್ಠವಾದ ಲೈಲತುಲ್ ಕದ್ರ್ ಅಥವಾ ವಿಧಿ ನಿರ್ಣಾಯಕ ರಾತ್ರಿಯಿದೆ.

ರಮದಾನ್ ಇಂತಹ ಅನೇಕ ಮಹತ್ವಗಳನ್ನೊಳಗೊಂಡ ಪುಣ್ಯಗಳ ವಸಂತಕಾಲವೆಂದು ತಿಳಿದಿದ್ದ ಪ್ರವಾದಿ(ﷺ), ಸಹಾಬತ್ ಮತ್ತು ಅವರ ಶಿಷ್ಯ ವೃಂದವು ರಮದಾನನ್ನು ಅತ್ಯಂತ ಭವ್ಯವಾಗಿ ಸ್ವಾಗತಿಸುತ್ತಿದ್ದರೆಂದು ಅವರ ಚರಿತ್ರೆಯನ್ನು ಪರಿಶೀಲಿಸಿದರೆ ತಿಳಿಯುತ್ತದೆ. ಸಚ್ಚರಿತರಾದ ಪೂರ್ವಿಕರು ರಮದಾನಿನ ಬೆಲೆಬಾಳುವ ಪ್ರತಿಯೊಂದು ಸಮಯವನ್ನು ಸದುಪಯೋಗಪಡಿಸಿಕೊಳ್ಳಲು ಪ್ರಯತ್ನಿಸಿದ್ದರು. ನಾವು ನಮ್ಮ ಎಲ್ಲಾ ಆಟ-ವಿನೋದಗಳನ್ನು ದೂರವಿಟ್ಟು ರಮದಾನಿನಲ್ಲಿ ಸಲಫುಗಳು ಪ್ರಯತ್ನಿಸಿದಂತೆ ಪರಮಾವಧಿ ಒಳಿತಿನಲ್ಲಿ ಏರ್ಪಡಲು ಗಮನಹರಿಸಬೇಕು. ಅಲ್ಲಾಹನು ಅನುಗ್ರಹಿಸಲಿ. ಆಮೀನ್.

## ಕುರ್‌ಆನಿನ ಜೊತೆಯಲ್ಲಿ:

ಸತ್ಯವಿಶ್ವಾಸಿಗಳು ಕುರ್‌ಆನ್ ಪಾರಾಯಣ, ಅಧ್ಯಯನ, ಮನನ

ಮಾಡಿಕೊಂಡು ಅದರ ವಿಧಿ-ನಿಷೇಧಗಳನ್ನು ಜೀವನದಲ್ಲಿ ಕಾರ್ಯರೂಪಕ್ಕಿಳಿಸಿ ನಿರಂತರವಾಗಿ ಕುರ್‌ಆನಿನೊಂದಿಗೆ ಸಂಬಂಧವನ್ನಿಟ್ಟುಕೊಳ್ಳಬೇಕಾಗಿದೆ. ಅನ್ಯಥಾ ಅವರು ಕುರ್‌ಆನನ್ನು ಕೈಬಿಟ್ಟವರಾಗಿ ಮಾರ್ಪಟ್ಟು ಅಂಥಹವರ ವಿರುದ್ಧ ಪ್ರವಾದಿ(ﷺ) ಯವರು ಅಲ್ಲಾಹನ ನ್ಯಾಯಾಲಯದಲ್ಲಿ ಸಾಕ್ಷಿ ನುಡಿಯುವರು. ಅಲ್ಲಾಹನು ಹೇಳುತ್ತಾನೆ:

﴿ وَقَالَ ٱلرَّسُولُ يَـٰرَبِّ إِنَّ قَوۡمِى ٱتَّخَذُواْ هَـٰذَا ٱلۡقُرۡءَانَ مَهۡجُورً۬ا ٣٠ ﴾

"(ಅಂದು) ಪ್ರವಾದಿ ಹೇಳುತ್ತಾರೆ. ನನ್ನ ಪ್ರಭೂ ನನ್ನ ಜನಾಂಗದವರು ಈ ಕುರ್‌ಆನನ್ನು ಅಪಹಾಸ್ಯಕ್ಕೆ ಗುರಿಪಡಿಸಿದ್ದರು." (25:30)

ಸಲಫುಗಳು ಕುರ್‌ಆನ್ ಪಾರಾಯಣ ಅಧ್ಯಯನ ಮತ್ತು ಜೀವನದಲ್ಲಿ ಅದನ್ನು ಪ್ರಯೋಗಕ್ಕಿಳಿಸುವ ನಿಟ್ಟಿನಲ್ಲಿ ಕಾರ್ಯತತ್ಪರರಾಗಿದ್ದರು. ರಮದಾನ್ ತಿಂಗಳಲ್ಲಿ ಅವರು ಕುರ್‌ಆನಿನೊಂದಿಗೆ ಒಂದು ಪ್ರತ್ಯೇಕವಾದ ಸಂಬಂಧವನ್ನು ಸ್ಥಾಪಿಸುತ್ತಿದ್ದರು. ರಮದಾನಿನಲ್ಲಿ ಪರಮ ಕರುಣಾಮಯಿಯ ಮಹತ್ತರವಾದ ಅನುಗ್ರಹವಾದ ಕುರ್‌ಆನ್ ಅವತೀರ್ಣಗೊಂಡಿರುವುದರಿಂದ ಸಲಫುಗಳು ಈ ತಿಂಗಳಲ್ಲಿ ಕುರ್‌ಆನಿನೊಂದಿಗಿರುವ ಸಂಪರ್ಕವನ್ನು ಮತ್ತಷ್ಟು ಆಳಕ್ಕೆ ಕೊಂಡೊಯ್ಯುತ್ತಿದ್ದರು. ಅವರ ಈ ಸಂಪರ್ಕವು ಕೃತಜ್ಞತೆ ಮತ್ತು ಬಾಧ್ಯತೆಯ ಮೂಲಕ ಪ್ರಕಟಗೊಳ್ಳುತ್ತಿತ್ತು.

ಪ್ರತಿವರ್ಷ ರಮದಾನಿನಲ್ಲಿ ಜಿಬ್ರೀಲರು ಆಗಮಿಸಿ ಪ್ರವಾದಿ(ﷺ) ಯವರಿಗೆ ಕುರ್‌ಆನಿನ ಶಿಕ್ಷಣ ನೀಡುತ್ತಿದ್ದರು. ಪಾರಾಯಣ ಮತ್ತು ಅಧ್ಯಯನದ ಈ ಶಿಕ್ಷಣವು ರಾತ್ರಿಯ ವೇಳೆಯಲ್ಲಿ ನಡೆಯುತ್ತಿತ್ತು. ಜೀವನದ ಇತರ ಜಂಜಡಗಳಿಂದ ಮುಕ್ತರಾಗಿ ಏಕಾಗ್ರಚಿತ್ತದಿಂದ ಕುರ್‌ಆನಿನ ಆಶಯವನ್ನು ಗ್ರಹಿಸಲು ರಾತ್ರಿಯು ಪ್ರಶಸ್ತವಾದ ಸಮಯವಾಗಿದೆ.

ಅಲ್ಲಾಹನು ಹೇಳುತ್ತಾನೆ:

﴿ إِنَّ نَاشِئَةَ ٱلَّيۡلِ هِىَ أَشَدُّ وَطۡـًٔ۬ا وَأَقۡوَمُ قِيلاً ٦ ﴾

"ವಾಸ್ತವದಲ್ಲಿ ರಾತ್ರಿಕಾಲದ ಏಳುವಿಕೆಯು ಆತ್ಮ ನಿಯಂತ್ರಣದ ನಿಟ್ಟಿನಲ್ಲಿ ಪರಿಣಾಮಕಾರಿಯಾಗಿದೆ ಮತ್ತು ಕುರ್‌ಆನನ್ನು ಪಠಿಸುವುದಕ್ಕೆ ಹೆಚ್ಚು ಯೋಗ್ಯವಾಗಿದೆ." (73:6) (ಹೆಚ್ಚಿನ ವಿವರಣೆಗಾಗಿ ಇಬ್ನ್ ರಜಬ್‌ರವರ ಲತಾಇಫುಲ್ ಮಆರಿಫ್ ನೋಡಿರಿ. ಪುಟ 183)

ಸಲಫುಗಳ ಚರಿತ್ರೆಯನ್ನು ಪರಿಶೋಧಿಸಿದರೆ ಅವರು ರಮದಾನಿನ ರಾತ್ರಿಗಳನ್ನು ಕುರ್‌ಆನ್ ಪಾರಾಯಣದಿಂದ ಧನ್ಯಗೊಳಿಸಿರುವುದನ್ನು ನೋಡಬಹುದು. ಇಮಾಮ್ ಅಸ್ವದ್ ಬಿನ್ ಯಝೀದ್ ಅನ್ನಖಈ ಅವರು ಜಾಹಿಲಿಯ್ಯತ್ ಮತ್ತು ಇಸ್ಲಾಮಿನಲ್ಲಿ ಜೀವಿಸಲು ಅವಕಾಶ ಲಭಿಸಿದ ಕೂಫಾದ ವಿದ್ವಾಂಸರಾಗಿದ್ದರು. ಅವರು ಮುಆದ್ ಬಿನ್ ಜಬಲ್(ؓ), ಬಿಲಾಲ್(ؓ), ಇಬ್ನ್ ಮಸ್‌ಊದ್(ؓ), ಆಯಿಶಾ (ؓ), ಹುದೈಫಾ(ؓ) ಮೊದಲಾದ ಹಲವಾರು ಸಹಾಬಿಗಳನ್ನು ಖುದ್ದು ಭೇಟಿಯಾಗಿ ಅವರಿಂದ ಜ್ಞಾನ ಪಡೆದ ವ್ಯಕ್ತಿಯಾಗಿದ್ದರು. ದೊಡ್ಡ ಭಕ್ತ ಮತ್ತು ಆಬಿದ್ ಆಗಿದ್ದ ಅವರು ರಮದಾನಿನಲ್ಲಿ ಪ್ರತಿ ಎರಡು ದಿನಗಳಿಗೊಂದಾವರ್ತಿ ಕುರ್‌ಆನನ್ನು ಸಂಪೂರ್ಣವಾಗಿ ಪಾರಾಯಣ ಮಾಡಿ ಮುಗಿಸುತ್ತಿದ್ದರು. ರಮದಾನೇತರ ದಿನಗಳಲ್ಲಿ ಅವರು ಆರು ದಿನಗಳಿಗೊಮ್ಮೆ ಸಮಗ್ರ ಕುರ್‌ಆನ್ ಪಾರಾಯಣ ಮಾಡುತ್ತಿದ್ದರು. (ಇಮಾಮ್ ದಹಬಿಯವರ ಸಿಯರು ಅಲ್‌ಲಾಮಿನ್ನುಬಲಾ ಸಂಪುಟ 4 ಪುಟ 50)

ಇಮಾಮ್ ಮಾಲಿಕ್, ಸುಫ್ಯಾನುಸ್ಸೌರಿ ಯಂಥವರು ರಮದಾನಿನಲ್ಲಿ ಇತರ ಎಲ್ಲಾ ಚರ್ಚೆಗಳನ್ನು ಬದಿಗಿಟ್ಟು ಕುರ್‌ಆನ್ ಪಾರಾಯಣದಲ್ಲಿ ನಿರತರಾಗುತ್ತಿದ್ದರು. ಅವರು ಕಂಠಪಾಠ ಪಾರಾಯಣ ಮಾಡುವುದಕ್ಕಿಂತ ಗ್ರಂಥವನ್ನು ನೋಡಿಯೇ ಪಾರಾಯಣ ಮಾಡಲು ಪ್ರತ್ಯೇಕ ಆಸ್ಥೆ ವಹಿಸುತ್ತಿದ್ದರು. ಏಕೆಂದರೆ ನೋಡಿ ಓದಿದರೆ ಕಣ್ಣುಗಳು ಕೂಡ ಆ ಪುಣ್ಯದಲ್ಲಿ ಪಾಲ್ಗೊಳ್ಳುತ್ತಿತ್ತು.

ಸಲಫುಗಳು ರಮದಾನಿನಲ್ಲಿ ಧಾರಾಳವಾಗಿ ಕುರ್‌ಆನ್ ಪಾರಾಯಣ ಮಾಡುತ್ತಿದ್ದರೆಂಬ ವರದಿಗಳನ್ನು ನೋಡುವಾಗ ಕೆಲವರಲ್ಲಿ ಸಹಜವಾಗಿಯೇ ಒಂದು ಸಂಶಯ ಉದ್ಭವಿಸಬಹುದು. ಸಲಫುಗಳ ಈ ನಡೆ ಪವಿತ್ರ ಕುರ್‌ಆನನ್ನು ಮೂರು ದಿನಗಳಿಗಿಂತ ಕಡಿಮೆ ಅವಧಿಯಲ್ಲಿ ಪಾರಾಯಣ ಮಾಡಿ ಮುಗಿಸುವುದು ವಿರೋಧಿಸಿರುವ (ಫತ್‌ಹುಲ್ ಬಾರಿ ಸಂಪುಟ 9 ಪುಟ 97) ಹದೀಸಿಗೆ ವಿರೋಧವಾಗುವುದಿಲ್ಲವೇ? ಹಾಫಿಝ್ ಇಬ್ನ್ ರಜಬ್ ಅದಕ್ಕೆ ಒಂದು ವಿವರಣೆಯನ್ನು ನೀಡಿದ್ದಾರೆ. "ವಿರೋಧಿಸಲ್ಪಟ್ಟಿರುವುದು ಶಾಶ್ವತವಾಗಿ ಮೂರು ದಿನಗಳಿಗಿಂತ ಕಡಿಮೆ ಅವಧಿಯಲ್ಲಿ ಕುರ್‌ಆನ್ ಪಾರಾಯಣ ಮಾಡಿ ಮುಗಿಸುವ ಕ್ರಮವಾಗಿದೆ. ಆದರೆ ರಮದಾನಿನಂತಹ ಉತ್ಕೃಷ್ಟ ರಾತ್ರಿಗಳಲ್ಲಿ ಲೈಲತುಲ್ ಕದ್ರ್ ನಿರೀಕ್ಷಿಸುವ ರಾತ್ರಿಗಳಲ್ಲಿ ಮಕ್ಕಾದಂತಹ ಪವಿತ್ರ ಸ್ಥಳಗಳಲ್ಲಿ ಹಾಗೆ ಮಾಡುವುದರಲ್ಲಿ ವಿರೋಧವಿಲ್ಲ. ಮಾತ್ರವಲ್ಲದೆ ಅಂತಹ ಸಂದರ್ಭಗಳನ್ನು ಪರಮಾವಧಿ ಸದುಪಯೋಗಪಡಿಸಿಕೊಳ್ಳಬೇಕು. ಇಮಾಮ್

ಅಹ್ಮದ್, ಇಸ್‌ಹಾಕ್, ಮೊದಲಾದವರು ಹೀಗೆಯೇ ಅಭಿಪ್ರಾಯ-ಪಟ್ಟಿದ್ದಾರೆ. ಸಲಫುಗಳ ಪ್ರವೃತ್ತಿಯೂ ಹೀಗಿತ್ತು." (ಲತಾಇಫುಲ್ ಮಆರಿಫ್ ಪುಟ 183)

### ರಾತ್ರಿ ನಮಾಝ್:

ಏಕಾಗ್ರಚಿತ್ತರಾಗಿ ರಾತ್ರಿಯ ಅಂತಿಮ ಜಾವದಲ್ಲಿ ಸೃಷ್ಟಿಕರ್ತನ ಪಾವನ ಸನ್ನಿಧಿಯಲ್ಲಿ ಪ್ರಾರ್ಥನೆಯಲ್ಲಿ ನಿರತರಾಗುವುದು ಪರಲೋಕ ವಿಜಯವನ್ನು ಬಯಸುವ ಸತ್ಯವಿಶ್ವಾಸಿಗಳ ಒಂದು ಸದ್ಗುಣವಾಗಿದೆ. ರಾತ್ರಿ ನಮಾಝಿನ ಸಮಯ ಸತ್ಯವಿಶ್ವಾಸಿಗಳ ಮಟ್ಟಿಗೆ ಎಲ್ಲಾ ಬೇಡಿಕೆ, ಆಗ್ರಹ, ಕಷ್ಟಕಾರ್ಪಣ್ಯ, ದುಃಖ-ದುಮ್ಮಾನ-ಗಳನ್ನು ಕರುಣಾನಿಧಿಯಾದ ಅಲ್ಲಾಹನ ಮುಂದೆ ನಿವೇದಿಸಿಕೊಂಡು ನಿರಾಳವಾಗುವ ಪ್ರಶಸ್ತ ಸಂದರ್ಭವಾಗಿದೆ.

ಅಲ್ಲಾಹನು ಹೇಳುತ್ತಾನೆ:



"ಅವರು ರಾತ್ರಿ ಸ್ವಲ್ಪವೇ ನಿದ್ರಿಸುತ್ತಿದ್ದರು ಮತ್ತು ಅವರು ರಾತ್ರಿಯ ಕೊನೆಯ ಜಾವಗಳಲ್ಲಿ ಕ್ಷಮೆಯಾಚನೆ ಮಾಡುತ್ತಿದ್ದರು." (51:17-18)

ಸಲಫುಗಳು ರಾತ್ರಿ ನಮಾಝಿನ ಕಾರ್ಯದಲ್ಲಿ ಸದಾ ಜಾಗರೂ-ಕರಾಗಿರುತ್ತಿದ್ದರು. ರಮದಾನ್‌ನಲ್ಲಾದರೆ ಇತರ ಸತ್ಕರ್ಮಗಳಲ್ಲಿ ಗಮನಹರಿಸಿದಂತೆ ರಾತ್ರಿ ನಮಾಝಿನ ವಿಷಯದಲ್ಲಿಯೂ ಅತೀವ ಮುತುವರ್ಜಿ ವಹಿಸುತ್ತಿದ್ದರು.

ಅಬೂ ಉಸ್ಮಾನು ನ್ನಹ್ದಿ(ﷺ) ಹೇಳುತ್ತಾರೆ: "ನಾನು ಏಳು ದಿನ ಅಬೂ ಹುರೈರ(ﷺ) ರ ಬಳಿಯಲ್ಲಿ ಅತಿಥಿಯಾಗಿ ಉಳಿದಿದ್ದೆ. ಆಗ ಅವರು, ಅವರ ಪತ್ನಿ ಮತ್ತು ಸೋದರ ರಾತ್ರಿಯನ್ನು ಮೂರಾಗಿ ವಿಭಜಿಸಿ ಪ್ರತಿಯೊಬ್ಬರು ಪಾಳಿಯನ್ನು ನಿಶ್ಚಯಿಸಿ ನಮಾಝ್ ನಿರ್ವಹಿಸುತ್ತಿ-ದ್ದರಲ್ಲದೆ ಇತರರನ್ನು ಅದಕ್ಕಾಗಿ ಕರೆದು ಎಚ್ಚರಿಸುತ್ತಿದ್ದರು." (ಸಿಯರು ಅಲ್‌ಲಾಮಿನ್ನುಬಲಾ ಸಂಪುಟ 2 ಪುಟ 609)

ರಾತ್ರಿ ನಮಾಝುನ್ನು ತೊರೆದು ಮಲಗಿದರೆ ಅವರು ನಿದ್ದೆ ಬೀಳು-ತ್ತಿರಲಿಲ್ಲ. ಶದ್ದಾದ್ ಬಿನ ಔಸ್(ﷺ) ತಮ್ಮ ಚಾಪೆಯಲ್ಲಿ ಮಲಗಿದರೆ ನಿದ್ರೆ ಬರದೆ ಚಡಪಡಿಸುತ್ತಿದ್ದರು. ಆಗ ಅವರು "ಓ ಅಲ್ಲಾಹನೇ, ನರಕವು ನನ್ನನ್ನು ನಿದ್ರಿಸಲು ಬಿಡುತ್ತಿಲ್ಲ" ಎಂದೆನ್ನುತ್ತಾ ಎದ್ದು ಹೋಗಿ ನಮಾಝ್ ನಿರ್ವಹಿಸುತ್ತಿದ್ದರು. ಸತ್ಯವಿಶ್ವಾಸಿಗಳ ಕುರಿತು ಅಲ್ಲಾಹನು ಹೇಳಿರುವುದು ಇಲ್ಲಿ ಸ್ಮರಣೀಯವಾಗಿದೆ.



"ಅವರ ಬೆನ್ನುಗಳು ಹಾಸಿಗೆಗಳನ್ನು ಬಿಟ್ಟಿರುತ್ತವೆ. ತಮ್ಮ ಪ್ರಭುವನ್ನು ಭಯ ಹಾಗೂ ನಿರೀಕ್ಷೆಯೊಂದಿಗೆ ಪ್ರಾರ್ಥಿಸುತ್ತಾರೆ. ನಾವು ಅವರಿಗೆ ದಯಪಾಲಿಸಿರುವ ಜೀವನಾಧಾರದಿಂದ ಖರ್ಚು ಮಾಡುತ್ತಾರೆ." (32:16)

### ಉದಾರ ಮನಸ್ಸು ಮತ್ತು ಸತ್ಕರ್ಮಗಳು:

ಸತ್ಯವಿಶ್ವಾಸಿಗಳು ಒಳಿತಿನ ಅವಕಾಶವನ್ನು ವ್ಯರ್ಥಗೊಳಿಸದೆ ಅದನ್ನು ಸದುಪಯೋಗಪಡಿಸಿಕೊಂಡು ಸತ್ಕರ್ಮವೆಸಗಲು ಪರಸ್ಪರ ಪೈಪೋಟಿಯಲ್ಲಿ ಏರ್ಪಡುತ್ತಾರೆ.

ಅಲ್ಲಾಹನು ಹೇಳುತ್ತಾನೆ:



"ನಿಮ್ಮ ಪ್ರಭುವಿನ ಕ್ಷಮೆಯ ಕಡೆಗೆ ಮತ್ತು ಭೂಮಿ-ಆಕಾಶಗಳಷ್ಟು ವಿಶಾಲವಾಗಿರುವ ಸ್ವರ್ಗದ ಕಡೆಗೆ ಧಾವಿಸಿರಿ. ಅದು ದೇವಭಯ-ವುಳ್ಳವರಿಗಾಗಿ ಸಿದ್ಧಗೊಳಿಸಲ್ಪಟ್ಟಿರುತ್ತದೆ." (3:133)



"..ಆದುದರಿಂದ ಸತ್ಕರ್ಮಗಳಲ್ಲಿ ಪರಸ್ಪರ ಸ್ಪರ್ಧಿಸಲು ಪ್ರಯ-ತ್ನಿಸಿರಿ. ಕೊನೆಗೆ ನಿಮಗೆಲ್ಲರಿಗೂ ಅಲ್ಲಾಹನ ಕಡೆಗೆ ಮರಳಿ ಹೋಗಲಿಕ್ಕಿದೆ." (5:48)

ಒಂದು ಒಳಿತು ಇನ್ನಿತರ ಹಲವಾರು ಒಳಿತುಗಳಿಗೆ ಪ್ರೇರಣೆ ಮತ್ತು ಸ್ಫೂರ್ತಿಯಾಗಿರುತ್ತದೆ. ಕೆಡುಕಿನ ವಿಷಯ ಇದಕ್ಕೆ ತದ್ವಿರುದ್ಧ.

ಆದುದರಿಂದ ಪಾಪಗಳು ಸಂಭವಿಸಿದ ತಕ್ಷಣ ಪಶ್ಚಾತ್ತಾಪದ ಮನಸ್ಸಿನೊಂದಿಗೆ ಪ್ರಭುವಿನೆಡೆಗೆ ಮರಳಿ ಒಳಿತುಗಳನ್ನು ವರ್ಧಿಸಲು ಪ್ರಯತ್ನಿಸಬೇಕು. ಅದು ಕೆಡುಕನ್ನು ಅಳಿಸಿಹಾಕುತ್ತದೆ.

ಅಲ್ಲಾಹನು ಹೇಳುತ್ತಾನೆ:



"...ವಾಸ್ತವದಲ್ಲಿ ಪುಣ್ಯಕಾರ್ಯಗಳು ಪಾಪಕಾರ್ಯಗಳನ್ನು ದೂರೀಕರಿಸುತ್ತವೆ. ಇದು ಅಲ್ಲಾಹನನ್ನು ಸ್ಮರಿಸುವವರಿಗೊಂದು ಸ್ಮರಣೆಯಾಗಿರುತ್ತದೆ." (11:114)

ಒಳಿತುಗಳಲ್ಲಿ ಇತರರಿಗಿಂತ ಮುಂಚೂಣಿಯಲ್ಲಿದ್ದ ಪ್ರವಾದಿ(ﷺ)ಯವರು ರಮದಾನಿನಲ್ಲಿ ರಭಸದಲ್ಲಿ ಬೀಸುವ ಗಾಳಿಯಂತೆ ಒಳಿತಿನಲ್ಲಿ ಮುನ್ನಡೆಯುತ್ತಿದ್ದರು. ಬಹಳ ಔದಾರ್ಯವಂತರಾಗಿದ್ದ ಅವರ ಔದಾರ್ಯತೆ ರಮದಾನಿನಲ್ಲಿ ಜಿಬ್ರೀಲರು ಆಗಮಿಸಿ ಕುರ್‌ಆನ್ ಹೇಳಿಕೊಡುವಾಗ ಮತ್ತಷ್ಟು ವರ್ಧಿಸುತ್ತಿತ್ತು. (ಬುಖಾರಿ ಮುಸ್ಲಿಂ)

### ಸಲಫುಗಳು ಮತ್ತು ಸಮಯದ ವಿನಿಯೋಗ :

ಸಮಯಕ್ಕೆ ಯಾವುದೇ ಬೆಲೆಯನ್ನು ಕಲ್ಪಿಸದೆ ಸ್ವೇಚ್ಛೆಯಂತೆ ಜೀವಿಸುವುದು ಸತ್ಯವಿಶ್ವಾಸಿಗಳಿಗೆ ಭೂಷಣವಲ್ಲ. ಸತ್ಯವಿಶ್ವಾಸಿಗಳು ಯಾವತ್ತೂ ವ್ಯರ್ಥವಾಗಿ ಸಮಯವನ್ನು ಕಳೆಯುವವರಲ್ಲ. ಅನಾವಶ್ಯಕ ಕಾರ್ಯಗಳಲ್ಲಿ ಏರ್ಪಡಲು ಅವರಿಗೆ ಸಮಯವೇ ಇರುವುದಿಲ್ಲ. ರಮದಾನಿನಂತಹ ಪುಣ್ಯಗಳ ಕೊಯ್ಲು ಕಾಲವನ್ನು ವೃಥಾ ಕಳೆದುಕೊಳ್ಳಲಾರರು. ಆದರೆ ನಮ್ಮಲ್ಲಿ ಹೆಚ್ಚಿನವರ ಜೀವನವನ್ನು ಪರಿಶೋಧಿಸಿದರೆ ಅವರು ಅತ್ಯಧಿಕ ಸಮಯ ವ್ಯರ್ಥ ಮಾಡುವುದು ರಮದಾನಿನಲ್ಲಾಗಿದೆಯೆಂದು ಕಂಡು ಬರುತ್ತದೆ.

ಆದರೆ ಸಲಫುಗಳು ಸಮಯದ ಕುರಿತು ಸ್ಪಷ್ಟವಾದ ಪ್ರಜ್ಞೆಯನ್ನಿಟ್ಟುಕೊಂಡಿದ್ದರು. ಹಸನುಲ್ ಬಸರಿ(ರ) ಹೇಳುತ್ತಾರೆ: "ಓ ಮನುಷ್ಯ ಪುತ್ರಾ! ನಿನಗೆ ಕೆಲವು ದಿನಗಳು ಮಾತ್ರ ಬಾಕಿಯುಳಿದಿದೆ. ಒಂದು ದಿನ ಕಳೆದಾಗ ನಿನ್ನ ಅಲ್ಪಭಾಗವು ನಷ್ಟವಾಯಿತು. ಓ ಆದಮನ ಪುತ್ರನೇ! ಹಗಲು ನಿನ್ನ ಅತಿಥಿಯಾಗಿದೆ. ಅದರೊಂದಿಗೆ ನೀನು ಗೌರವಾನ್ವಿತನಾಗಿ ವ್ಯವಹರಿಸು. ನೀನು ಅತ್ಯುತ್ತಮವಾಗಿ ವರ್ತಿಸಿದರೆ ಅದು ನಿನ್ನ ಕುರಿತು ಒಳಿತನ್ನು ಸಾಕ್ಷ್ಯ ನುಡಿದು ಬೀಳ್ಕೊಡುತ್ತದೆ. ನೀವು ಅದರೊಂದಿಗೆ ಕೆಟ್ಟದಾಗಿ ವರ್ತಿಸಿದರೆ ಅದು ನಿನ್ನನ್ನು ಆಕ್ಷೇಪಿಸಿ ವಿದಾಯಕೋರುತ್ತದೆ. ರಾತ್ರಿಯ ವಿಷಯವೂ ತದ್ವೈವ. ಐಹಿಕ ಜೀವನವು ಮೂರು ದಿನಗಳದ್ದಾಗಿದೆ. ಒಂದು ನಿನ್ನೆ. ಅದು ಆಗಲೇ ಕಳೆದು ಹೋಗಿದೆ. ಎರಡು ನಾಳೆ. ಅದು ನಿನಗೆ ಲಭಿಸಬೇಕೆಂದಿಲ್ಲ. ಮೂರು ಇಂದು. ಇದನ್ನು ನೀನು ಸದುಪಯೋಗಪಡಿಸಿಕೊಂಡು ಸಾರ್ಥಕನಾಗು."

ಇಬ್ನ್ ಮಸ್‌ಊದ್(ರ) ಹೇಳುತ್ತಾರೆ: "ಕರ್ಮಗಳನ್ನು ವರ್ಧಿಸದೆ ನನ್ನ ಆಯುಷ್ಯದಲ್ಲಿ ಕಳೆದ ದಿನಗಳಷ್ಟು ದುಃಖದ ದಿನಗಳು ನನ್ನ ಮಟ್ಟಿಗೆ ಬೇರೊಂದಿಲ್ಲ."

ಇಬ್ನುಲ್ ಖಯ್ಯಿಂ(ರ) ಹೇಳುತ್ತಾರೆ: "ಸಮಯವನ್ನು ಪೋಲು ಮಾಡುವುದು ಮರಣಕ್ಕಿಂತಲೂ ಗುರುತರವಾಗಿದೆ. ಏಕೆಂದರೆ ಸಮಯವನ್ನು ವ್ಯರ್ಥಗೊಳಿಸುವುದು ನಿನ್ನನ್ನು ಅಲ್ಲಾಹ್ ಮತ್ತು ಪರಲೋಕದಿಂದ ಬೇರ್ಪಡಿಸುತ್ತದೆ. ಆದರೆ ಮರಣವಾದರೋ ಲೋಕದಿಂದ ಹಾಗೂ ಅದರ ಜನರಿಂದ ಮಾತ್ರ ಬೇರ್ಪಡಿಸುತ್ತದೆ."

ಆದುದರಿಂದ ನಾವು ಸಮಯವು ಪೋಲಾಗದಂತೆ ಜಾಗೃತೆ ವಹಿಸಬೇಕು. ಆಲಸ್ಯವನ್ನು ತೊಡೆದು ಹಾಕಿ ಅಲ್ಲಾಹನ ಸಂಪ್ರೀತಿಗೆ ಪಾತ್ರರಾಗಲು ಆತ್ಮಾರ್ಥವಾಗಿ ಕಾರ್ಯನಿರತರಾಗೋಣ. ಅಲ್ಲಾಹನು ಅನುಗ್ರಹಿಸಲಿ ಆಮೀನ್. ■

---

*40 ನೇ ಪುಟದಿಂದ* **....ಶಿಷ್ಟಾಚಾರ**

ಗುರಿಪಡಿಸಿದ್ದರು." (25:30)

7. ಕುರ್‌ಆನ್ ಪಾರಾಯಣದಿಂದ ವಿರಮಿಸುವಾಗ ಪ್ರಾರ್ಥನೆಯೊಂದಿಗೆ ನಿಲ್ಲಿಸಿರಿ.

8. ಅಲ್ಲಾಹನ ಸಂಪ್ರೀತಿಯನ್ನು ಮಾತ್ರ ಬಯಸಿ ಪಾರಾಯಣ ಮಾಡಿರಿ. ಪ್ರತಿಯೊಂದು ಕರ್ಮದ ಪ್ರತಿಫಲವು ಸಂಕಲ್ಪವನ್ನು ಆಧರಿಸಿಕೊಂಡಿದೆ.

9. ಬೇರೆ ಉದ್ದೇಶವನ್ನಿಟ್ಟುಕೊಂಡು ಕುರ್‌ಆನ್ ಪಾರಾಯಣ ಮಾಡುವುದು ನಿಷಿದ್ಧವಾಗಿದೆ. ಇತರರಿಂದ ಕೂಲಿ ಪಡೆಯಲು ಅಥವಾ ಚೆನ್ನಾಗಿ ಪಾರಾಯಣ ಮಾಡುವವನು ಎಂಬ ಪ್ರಶಂಸೆ ಗಿಟ್ಟಿಸುವ ಏಕಮಾತ್ರ ಉದ್ದೇಶದಿಂದ ಪಾರಾಯಣ ಮಾಡಬಾರದು. ■

# ಕುರ್‌ಆನ್ ಸಾಧಿಸಿದ ಕ್ರಾಂತಿ

ಬದಲಾವಣೆ ಅತಿಶೀಘ್ರ ಸಾಧ್ಯವಿದೆ ಎನ್ನುವುದಕ್ಕೆ ಆರನೇ ಶತಮಾನದ ಅರೇಬಿಯನ್ ಜನತೆ ಅತ್ಯುತ್ತಮ ಉದಾಹರಣೆಯಾಗಿದ್ದಾರೆ. ಇತಿಹಾಸದಲ್ಲಿ ಅತ್ಯಂತ ಕಗ್ಗತ್ತಲ ಯುಗದಲ್ಲಿ ವಾಸಿಸಿದ ಒಂದು ಸಮಾಜದಲ್ಲಿ ಹ್ರಸ್ವ ಅವಧಿಯಲ್ಲಿ ಉಂಟಾದ ಬದಲಾವಣೆ ಚಿಂತನಾರ್ಹ ಮತ್ತು ಆಶ್ಚರ್ಯಕರವಾಗಿದೆ. ಮದ್ಯ, ಜೂಜಾಟ, ದೈಹಿಕ ಸುಖಭೋಗವಿಲ್ಲದ ಜೀವನವು ಅವರ ಮಟ್ಟಿಗೆ ಯೋಚನೆಗೆ ಅತೀತವಾಗಿತ್ತು. ಮದ್ಯ, ಜೂಜಾಟ, ಹೆಣ್ಣಿನ ಕುರಿತು ಅವರು ಬರೆದು ಹಾಕಿದ ಹಾಡುಗಳಿಗೆ ಲೆಕ್ಕವಿಲ್ಲ. ಯುದ್ಧವೂ ಅವರ ಪ್ರಿಯ ಹವ್ಯಾಸವಾಗಿತ್ತು. ಗೋತ್ರ—ಗೋತ್ರಗಳ ನಡುವೆ ದೀರ್ಘಾವಧಿ ಯುದ್ಧ ನಡೆಯುತ್ತಿತ್ತು.

ಅವರು ಮದ್ಯಕ್ಕೆ ಎಷ್ಟರಮಟ್ಟಿಗೆ ದಾಸರಾಗಿದ್ದರೆಂದರೆ ಅವರಲ್ಲಿ ಹಲವರು ತಮ್ಮ ಮರಣದ ನಂತರ ಮದ್ಯ ತಯಾರಿಸುವ ದ್ರಾಕ್ಷೆಯ ಗಿಡಗಳಿರುವ ಜಾಗದಲ್ಲಿ ದಫನ ಮಾಡಬೇಕೆಂದು ಉಯಿಲು ಬರೆದಿಡುತ್ತಿದ್ದರು. ಇಂತಹ ಒಂದು ಜನತೆ ಅಲ್ಪ ಕಾಲಾವಧಿಯಲ್ಲಿ ಸುಸಂಸ್ಕೃತರು, ಜಗತ್ತಿನ ಮಾರ್ಗದರ್ಶಕರು ಮತ್ತು ನಾಯಕರಾಗಿ ಬದಲಾಗಿರುವುದರ ಹಿಂದೆ ಒಬ್ಬ ಪ್ರವಾದಿಯ ದೈವಿಕ ಪ್ರಕಟಣೆ ಪ್ರಭಾವವಿತ್ತು. ಸಾಮಾಜಿಕ ಪದ್ಧತಿಯ ಬದಲಾವಣೆಗಿಂತ ಮಾನಸಿಕ ಸಂಸ್ಕಾರ ಹಾಗೂ ಮಿದುಳಿನ ಪುನರುಜ್ಜೀವನವು ಪ್ರಮುಖವಾಗಿದೆಯೆಂದು ಅಚಲ ವಿಶ್ವಾಸವನ್ನಿಟ್ಟು ಕಾರ್ಯವೆಸಗಿದಾಗ ಬದಲಾವಣೆ ಸುಲಭವಾಯಿತು. ಅದಕ್ಕಾಗಿ ಉಪಯೋಗಿಸಿದ ಉಪಕರಣವಾದರೋ ಪರಮೋನ್ನತವಾದ ಕುರ್‌ಆನ್ ಹಾಗೂ ಪರಿಶುದ್ಧವಾದ ಪ್ರವಾದಿಚರ್ಯೆಯಾಗಿತ್ತು.

عَلَيْهِمْ ءَايَٰتِهِۦ وَيُزَكِّيهِمْ وَيُعَلِّمُهُمُ ٱلْكِتَٰبَ وَٱلْحِكْمَةَ
وَإِن كَانُوا۟ مِن قَبْلُ لَفِى ضَلَٰلٍ مُّبِينٍ ﴿٢﴾

“ನಿರಕ್ಷರಿಗಳ ನಡುವೆ ಅವರಿಂದಲೇ ಒಬ್ಬ ಸಂದೇಶವಾಹಕರನ್ನು ಎಬ್ಬಿಸಿದವನು ಅವನೇ. ಅವರು ಆ ಜನರಿಗೆ ಅವನ ಸೂಕ್ತಗಳನ್ನು ಓದಿ ಹೇಳುತ್ತಾರೆ. ಅವರ ಜೀವನವನ್ನು ಸಂಸ್ಕರಿಸುತ್ತಾರೆ. ಮತ್ತು ಅವರಿಗೆ ಗ್ರಂಥ ಹಾಗೂ ಸದ್ವಿವೇಕದ ಶಿಕ್ಷಣ ನೀಡುತ್ತಾರೆ. ವಸ್ತುತಃ ಇದಕ್ಕಿಂತ ಮುಂಚೆ ಅವರು ಸುಸ್ಪಷ್ಟ ಪಥಭ್ರಷ್ಟತೆಯಲ್ಲಿ ಬಿದ್ದಿದ್ದರು.” (62:2)

ಪವಿತ್ರ ಕುರ್‌ಆನಿನ ಪ್ರೌಢೋಜ್ವಲವಾದ ವಚನಗಳು ಅವರ ಮನಸ್ಸಿಗೆ ನಾಟಿತು. ಆ ಪಾವನ ವಚನಗಳನ್ನು ಉಪಯೋಗಿಸಿ ಪ್ರವಾದಿಯವರು ಅವರು ಮನಸ್ಸುಗಳನ್ನು ಸರ್ವ ಮಾಲಿನ್ಯಗಳಿಂದ ತೊಳೆದು ಶುಚಿಗೊಳಿಸಿದರು. ವಿಶ್ವಾಸದ ಶಾಂತಿಯ ತೀರಕ್ಕೆ ತಲುಪಿದಾಗ ಓದಿ ಕೇಳಿಸಲಾದ ಪ್ರತಿಯೊಂದು ವಚನಗಳನ್ನು ಅವರು ತಮ್ಮ ಜೀವನದೊಂದಿಗೆ ಹೋಲಿಸಿಕೊಂಡು ಆತ್ಮ ಪರಿಶೋಧನೆ ನಡೆಸಿದರು.

ಪ್ರವಾದಿ(ﷺ) ಯವರು ಸುಶ್ರಾವ್ಯವಾಗಿ ಪಾರಾಯಣ ಮಾಡಿ ಕೇಳಿಸುತ್ತಿದ್ದ ಆ ಪವಿತ್ರ ವಚನಗಳ ಮೂಲಕ ಅಲ್ಲಾಹನು ನಮ್ಮೊಂದಿಗೆ ಮಾತನಾಡುತ್ತಿದ್ದಾನೆಂದು ಸಹಾಬಿಗಳು ನಂಬಿದರು. ಬದಲಾವಣೆ ಸುಲಭವಾಯಿತು.

هُوَ ٱلَّذِى بَعَثَ فِى ٱلْأُمِّيِّۦنَ رَسُولًا مِّنْهُمْ يَتْلُوا۟

لَقَدْ أَنزَلْنَآ إِلَيْكُمْ كِتَٰبًا فِيهِ

﴿ذِكْرُكُمْ أَفَلَا تَعْقِلُونَ ﴿١٠﴾﴾

“ಜನರೇ, ನಾವು ನಿಮ್ಮದೇ ಪ್ರಸ್ತಾಪವಿರುವಂತಹ ಒಂದು ಗ್ರಂಥವನ್ನು ನಿಮ್ಮ ಕಡೆಗೆ ಕಳುಹಿಸಿದೆವು ನೀವು ವಿವೇಚಿಸುವುದಿಲ್ಲವೇ?” (21:10)

﴿إِنَّآ أَنزَلْنَٰهُ قُرْءَٰنًا عَرَبِيًّا لَّعَلَّكُمْ تَعْقِلُونَ ﴿٢﴾﴾

“ಇದನ್ನು ಚೆನ್ನಾಗಿ ತಿಳಿದುಕೊಳ್ಳಲು ಸಾಧ್ಯವಾಗುವಂತೆ ನಾವು ಇದನ್ನು ಕುರ್‌ಆನನ್ನಾಗಿ ಮಾಡಿ ಅರಬೀ ಭಾಷೆಯಲ್ಲಿ ಅವತೀರ್ಣಗೊಳಿಸಿದೆವು.” (12:2)

ಅಬೂ ತ್ವಲ್ಹತುಲ್ ಅನ್ಸಾರಿಯವರು(ؓ) ಶ್ರೀಮಂತ ಸಹಾಬಿಯಾಗಿದ್ದರು. ಅವರ ವಿಶಾಲವಾದ ಭೂಸೊತ್ತಿನಲ್ಲಿ ಅವರಿಗೆ ಅತ್ಯಂತ ಅಚ್ಚುಮೆಚ್ಚಾಗಿದ್ದುದು ಮಸೀದಿಯ ಮುಂಭಾಗದಲ್ಲಿದ್ದ ಬೈರೂಹಾ ಎಂಬ ತೋಟವಾಗಿತ್ತು. ಪವಿತ್ರ ಕುರ್‌ಆನಿನಲ್ಲಿ

﴿لَن تَنَالُوا۟ ٱلْبِرَّ حَتَّىٰ تُنفِقُوا۟ مِمَّا تُحِبُّونَ ۚ وَمَا
تُنفِقُوا۟ مِن شَىْءٍ فَإِنَّ ٱللَّهَ بِهِۦ عَلِيمٌ ﴿٩٢﴾﴾

“ನೀವು ನಿಮಗೆ ಬಹಳ ಪ್ರಿಯವಾಗಿರುವ ವಸ್ತುವನ್ನು (ಅಲ್ಲಾಹನ ಮಾರ್ಗದಲ್ಲಿ) ವ್ಯಯಿಸುವ ತನಕ ಪುಣ್ಯವನ್ನು ಪಡೆಯಲಾರಿರಿ. ನೀವು ಏನೇನು ಖರ್ಚು ಮಾಡುವಿರೋ ಅದರ ಬಗ್ಗೆ ಅಲ್ಲಾಹನು ಅಜ್ಞನಲ್ಲ.” (3:92) ಎಂಬ ವಚನವು ಅವತೀರ್ಣಗೊಂಡಾಗ ಅವರು ಪ್ರವಾದಿ(ﷺ) ಯವರ ಪಾವನ ಸನ್ನಿಧಿಗೆ ಬಂದು ಹೇಳಿದರು: “ಓ ಅಲ್ಲಾಹನ ಸಂದೇಶವಾಹಕರೇ, ಅಲ್ಲಾಹನು ನಿಮಗೆ ಪ್ರಿಯವಾಗಿರುವುದನ್ನು ಖರ್ಚು ಮಾಡುವ ತನಕ ನಿಮಗೆ ಪುಣ್ಯ ಲಭಿಸುವುದಿಲ್ಲವೆಂದು ಹೇಳುತ್ತಾನೆ. ನನ್ನ ಸೊತ್ತಿನಲ್ಲಿ ಅತ್ಯಂತ ಪ್ರೀತಿಪಾತ್ರವಾಗಿರುವುದು ಬೈರೂಹಾ ಆಗಿದೆ. ಅದನ್ನು ಅಲ್ಲಾಹನಿಗಾಗಿ ನಾನು ದಾನ ಮಾಡುತ್ತೇನೆ. ಅಲ್ಲಾಹನ ವತಿಯಿಂದ ನಾನು ಪುಣ್ಯ ಮತ್ತು ಪ್ರತಿಫಲವನ್ನು ನಿರೀಕ್ಷಿಸುತ್ತೇನೆ. ಅಲ್ಲಾಹನು ನಿಮಗೆ ಹೇಗೆ ತೋಚುವಂತೆ ಮಾಡುತ್ತಾನೋ ಅದರ ಪ್ರಕಾರ ಅದನ್ನು ಉಪಯೋಗಿಸಿಕೊಳ್ಳಿರಿ.”

ಆಗ ಪ್ರವಾದಿ(ﷺ) ಯವರು ಹೇಳುತ್ತಾರೆ: “ಶಹಭಾಷ್! ಶಹಭಾಷ್! ಅದು ಲಾಭದಾಯಕವಾದ ಸಂಪತ್ತಾಗಿದೆ. ಲಾಭಕರವಾದ ಸಂಪತ್ತು. ನೀವು ಅದನ್ನು ನಿಮ್ಮ ಹತ್ತಿರ ಸಂಬಂಧಿಗಳಿಗಾಗಿ ದಾನವಾಗಿ ಮೀಸಲಾಗಿಡಬೇಕೆಂದು ನಾನು ಅಭಿಪ್ರಾಯಪಡುತ್ತೇನೆ.” ಅಬೂ ತ್ವಲ್ಹತ್(ؓ) ಹೇಳುತ್ತಾರೆ: ನಾನು ಹಾಗೆಯೇ ಮಾಡುತ್ತೇನೆ. ಹಾಗೆ ಅವರು ಅದನ್ನು ತಮ್ಮ ಸಂಬಂಧಿಕರು ಹಾಗೂ ಚಿಕ್ಕಪ್ಪನ ಪುತ್ರರಿಗಾಗಿ ಪಾಲು ಮಾಡಿ ಕೊಟ್ಟರು.

ಅವರು ಪ್ರವಾದಿಪ್ರೇಮದ ಮೂಲಕ ಅಲ್ಲಾಹನ ಕ್ಷಮೆ ಮತ್ತು ಸಂಪ್ರೀತಿಗೆ ಪಾತ್ರರಾಗಿ ಸ್ವರ್ಗಪ್ರವೇಶವನ್ನು ಜೀವನದ ಮುಖ್ಯ ಉದ್ದೇಶವೆಂದು ಭಾವಿಸಿದರು. ಅವರು ಅದಕ್ಕಾಗಿ ತಮಗೆ ದಯಪಾಲಿಸಲ್ಪಟ್ಟ ಎಲ್ಲಾ ಕೊಡುಗೆಗಳನ್ನು ವಿನಿಯೋಗಿಸಿದರು. ಋಜುವಾದ ವಿಶ್ವಾಸವನ್ನು ಸ್ವೀಕರಿಸಿದ ತಾನು ಅದಕ್ಕನುಸಾರವಾದ ಸ್ವಭಾವ ಮತ್ತು ವರ್ತನೆಯನ್ನು ಮೈಗೂಡಿಸಿಕೊಳ್ಳಬೇಕಾದ ಅಗತ್ಯವಿಲ್ಲವೇ ಎಂದು ಅವರು ಯೋಚಿಸಿದರು. ಆದುದರಿಂದ ಕುಂದುಕೊರತೆಗಳು ಸಂಭವಿಸಬಹುದೇ ಎಂಬ ಸಂಶಯ ಕೂಡಾ ಅವರ ನಿದ್ದೆ ಗೆಡಿಸಿತ್ತು.

ಸಾಬಿತ್ ಬಿನ್ ಕೈಸ್(ؓ) ಧ್ವನಿಯ ಗಂಭೀರತೆಯಿಂದ ಗಮನ ಸೆಳೆಯುತ್ತಿದ್ದ ವ್ಯಕ್ತಿಯಾಗಿದ್ದರು. ಅವರು ಮೆಲುಧ್ವನಿಯಲ್ಲಿ ಹೇಳುವುದನ್ನು ಕೂಡಾ ಇತರರು ಅರ್ಥಮಾಡಿಕೊಳ್ಳುತ್ತಿದ್ದರು.

﴿يَٰٓأَيُّهَا ٱلَّذِينَ ءَامَنُوا۟ لَا تَرْفَعُوٓا۟ أَصْوَٰتَكُمْ فَوْقَ صَوْتِ
ٱلنَّبِىِّ وَلَا تَجْهَرُوا۟ لَهُۥ بِٱلْقَوْلِ كَجَهْرِ بَعْضِكُمْ
لِبَعْضٍ أَن تَحْبَطَ أَعْمَٰلُكُمْ وَأَنتُمْ لَا تَشْعُرُونَ ﴿٢﴾﴾

“ಸತ್ಯವಿಶ್ವಾಸಿಗಳೇ, ನಿಮ್ಮ ಧ್ವನಿಯನ್ನು ಪ್ರವಾದಿ(ﷺ) ಯವರ ಧ್ವನಿಗಿಂತ ಎತ್ತರಿಸಬೇಡಿರಿ. ಮತ್ತು ನೀವು ಪರಸ್ಪರ ಮಾತನಾಡುವಂತೆ ಪ್ರವಾದಿ(ﷺ) ಯವರೊಡನೆ ಉಚ್ಚಸ್ವರದಿಂದ ಮಾತನಾಡಬೇಡಿರಿ. ನಿಮಗೆ ಅರಿವೇ ಇಲ್ಲದಂತೆ ನಿಮ್ಮ ಕರ್ಮಗಳೆಲ್ಲವೂ ನಷ್ಟವಾಗಿ ಬಿಡದಿರಲಿ.” (49:2)

ಈ ಆಯತ್ ಅವತೀರ್ಣಗೊಂಡಾಗ ಅವರು ಪ್ರವಾದಿ(ﷺ) ಯವರ ಬಳಿಗೆ ಬರುವುದನ್ನು ನಿಲ್ಲಿಸಿದರು. ಅವರನ್ನು ಕಾಣದಿರುವಾಗ ಪ್ರವಾದಿ(ﷺ) ಯವರು ಹೀಗಾಗಲು ಕಾರಣವೇನೆಂದು ತಿಳಿದುಕೊಂಡು ಬರಲು ಒಬ್ಬರನ್ನು ಕಳುಹಿಸಿಕೊಟ್ಟರು. ದುಃಖದಿಂದ ತಲೆ ತಗ್ಗಿಸಿ ಕೂತ ಸಾಬಿತ್ ಬಿನ್ ಕೈಸ್(ؓ) ಆಗಂತುಕನೊಂದಿಗೆ ಹೇಳುತ್ತಾರೆ: “ನಾನು ಬಹಳ ಉಚ್ಚಸ್ವರದಿಂದ ಮಾತನಾಡುವ ವ್ಯಕ್ತಿಯಾಗಿದ್ದೇನೆ. ನನ್ನ ಧ್ವನಿಯು ಪ್ರವಾದಿ(ﷺ) ಯವರ ಧ್ವನಿಗಿಂತ ಮಿಗಿಲಾಗುವುದಿದೆ. ಈ ಕಾರಣದಿಂದ ನನ್ನ ಕರ್ಮಗಳು

*48 ನೇ ಪುಟಕ್ಕೆ*

# ಶೈತಾನರು ಸಂಕೋಲೆಯಲ್ಲಿ ಬಂಧಿಸಲ್ಪಟ್ಟರೂ ಕೆಡುಕು?

ಸಂಕೋಲೆಯಲ್ಲಿ ಬಂಧಿಸಲ್ಪಟ್ಟ ಶೈತಾನರಿಂದ ಕೇಡು ಸಂಭವಿಸಬಹುದು. ಆದರೆ ಅದು ರಮದಾನೇತರ ತಿಂಗಳುಗಳಲ್ಲಿ ಸಂಭವಿಸುವುದಕ್ಕಿಂತ ದುರ್ಬಲವಾಗಿರುತ್ತದೆ. ಇದು ಒಬ್ಬನ ಉಪವಾಸದ ಪೂರ್ಣತೆ ಹಾಗೂ ನ್ಯೂನತೆಗಳೊಂದಿಗೆ ತಳಕುಹಾಕಲ್ಪಟ್ಟಿದೆ. ಒಬ್ಬನ ಸಂಪೂರ್ಣವಾದ ಉಪವಾಸವು ಶೈತಾನರಿಂದ ಕೇಡುಗಳನ್ನು ತಡೆಯುವ ರೂಪದಲ್ಲಿ ಒಬ್ಬನ ನ್ಯೂನತೆಯಿಂದ ಕೂಡಿದ ಉಪವಾಸವು ತಡೆಯಲಾರದು.

ರಮದಾನ್ ಕಡ್ಡಾಯಕರ್ಮಗಳನ್ನು ಅತ್ಯಾಸಕ್ತಿಯಿಂದ ನಿರ್ವಹಿಸಿ ಐಚ್ಛಿಕ ಕರ್ಮಗಳನ್ನು ವರ್ಧಿಸುವ ಮೂಲಕ ಅಲ್ಲಾಹನ ಮುಂದೆ ವಿನಯಾನ್ವಿತರಾಗಲು ಸಹಾಯಕವಾಗುವ ತಿಂಗಳಾಗಿದೆ. ವೃತಾನುಷ್ಠಾನವನ್ನು ರೂಢಿಸಿಕೊಂಡವರು ಈ ತಿಂಗಳು ಪ್ರವೇಶಿಸುವಾಗ ಅತ್ಯಂತ ಸಂತೋಷಪಡುತ್ತಾರೆ.

ದುರ್ಬಲ ವಿಶ್ವಾಸಿಗಳ ಮಟ್ಟಿಗೆ ಈ ತಿಂಗಳ ಆಗಮನವು ಮಾನಸಿಕ ಕ್ಲೇಶವನ್ನು ಸೃಷ್ಟಿಸುತ್ತದೆ. ಅವರು ಮಾನಸಿಕವಾಗಿ ರಮದಾನನ್ನು ಇತರ ತಿಂಗಳುಗಳಂತೆಯೇ ಪರಿಗಣಿಸುತ್ತಾರೆ. ಇಂತಹ ಜನರಿಗೆ ಇಸ್ಲಾಮ್ ಕಲಿಸಿದ ಹೆಚ್ಚಿನ ಒಳಿತುಗಳನ್ನು ಸ್ವೀಕರಿಸಲು ಸಾಧ್ಯವಾಗುವುದಿಲ್ಲ. ಪೈಶಾಚಿಕತೆಯ ಆಳಕ್ಕಿಳಿದ ಮನುಷ್ಯನಿಗೆ ಅಲ್ಲಾಹನು ಉಪವಾಸದ ಪ್ರಯೋಜನ ಲಭಿಸುವಂತೆ ಮಾಡಲು ಅವಕಾಶಗಳನ್ನು ನೀಡುತ್ತಾನೆ. ಮಾನವನಲ್ಲಿ ಪೈಶಾಚಿಕತೆಯನ್ನು ಕಡಿಮೆ ಮಾಡಿ ಭಯಭಕ್ತಿಯಿಂದ ಅಲ್ಲಾಹನಿಗೆ ನಿಕಟರಾಗುವ ಸಂದರ್ಭದ ಅನುಕೂಲತೆಯನ್ನು ಒದಗಿಸಿಕೊಡುವುದು ರಮದಾನಿನ ಪ್ರತ್ಯೇಕತೆಯಾಗಿದೆ.

ಅಬೂಹುರೈರಾ(﵁) ಅವರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: "ರಮದಾನಿನಲ್ಲಿ ಆಕಾಶದ ಕವಾಟಗಳು ತೆರೆಯಲ್ಪಟ್ಟು ನರಕದ ಕವಾಟಗಳು ಮುಚ್ಚಲ್ಪಟ್ಟು ಶೈತಾನರನ್ನು ಸಂಕೋಲೆಗಳಿಂದ ಬಂಧಿಸಿಡಲಾಗುತ್ತದೆ." (ಬುಖಾರಿ)

ಅಲ್ಲಾಹನ ಮಾರ್ಗದಲ್ಲಿ ಉಪವಾಸ ಅನುಷ್ಠಿಸುವ ಸತ್ಯವಿಶ್ವಾಸಿಗಳಿಗೆ ಶೈತಾನರಿಂದ ಸಂಭವಿಸಲು ಸಾಧ್ಯತೆಯಿರುವ ಉಪಟಳ ಮತ್ತು ತೊಂದರೆಗಳಿಂದ ತಡೆಯುವುದು ಅಲ್ಲಾಹನು ಈ ತಿಂಗಳಿಗೆ ದಯಪಾಲಿಸಿದ ಗೌರವದ ಲಕ್ಷಣವಾಗಿದೆ.

ಅಬೂಹುರೈರಾ(﵁) ಅವರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳುತ್ತಾರೆ: "ರಮದಾನ್ ಪ್ರಥಮ ರಾತ್ರಿ ಆಸನ್ನವಾದರೆ ಶೈತಾನರು ಮತ್ತು ಜಿನ್ನ್‌ಗಳಲ್ಲಿ ಅಪಾಯಕಾರಿ (ಮಾರಿದ್) ಗಳನ್ನು ಸಂಕೋಲೆಗಳಲ್ಲಿ ಬಂಧಿಸಿಡಲಾಗುವುದು." (ಸಹೀಹ್ ಇಬ್ನ್ ಖುಝೈಮ 3/188)

ಈ ಹದೀಸನ್ನು ಆಧಾರವಾಗಿಟ್ಟುಕೊಂಡು ವಿದ್ವಾಂಸರು ರಮದಾನಿನಲ್ಲಿ ಶೈತಾನರು ಮನುಷ್ಯರ ಹತ್ತಿರ ವಸ್ತುಶಃ ಸುಳಿಯಲು ಅಸಾಧ್ಯವಾದ ರೀತಿಯಲ್ಲಿ ಬಂಧಿಸಲ್ಪಡುವುದಿಲ್ಲವೆಂದು ವಿವರಿಸಿದ್ದಾರೆ. ಅವರು ಜಿನ್ನ್ ವರ್ಗದಲ್ಲಿ ಉಪದ್ರವಕಾರಿಗಳಾದ (ಮರದತುಲ್ ಜಿನ್ನ್) ಶೈತಾನರು ಸಂಕೋಲೆಯಲ್ಲಿ ಬಂಧಿಸಿಡಲ್ಪಡುವುದರ ಜೊತೆಗೆ ಆ ಪ್ರಕಾರ ಬಂಧಿಸಲ್ಪಡದವರೂ ಅವರಲ್ಲಿದ್ದಾರೆಂದು ಕಲಿಸುತ್ತಾರೆ. ಇಮಾಮ್ ಇಬ್ನ್ ಖುಝೈಮ(﵀) ಈ ಕಾರ್ಯವನ್ನು ತಿಳಿಸುವ ಹದೀಸ್‌ಗಳನ್ನೊಳಗೊಂಡ ಅಧ್ಯಾಯಕ್ಕಿಟ್ಟ ಹೆಸರು "ಶೈತಾನ್ ಸಂಕೋಲೆಯಲ್ಲಿ ಬಂಧಿಸಲ್ಪಡುತ್ತಾರೆಂದು ಪ್ರವಾದಿ(ﷺ) ಯವರು ಹೇಳಿರುವುದರ ತಾತ್ಪರ್ಯ ಜಿನ್ನ್‌ಗಳಲ್ಲಿರುವ ಉಪದ್ರವಕಾರಿಗಳಾಗಿದ್ದಾರೆ. ಎಲ್ಲಾ ಶೈತಾನರುಗಳಲ್ಲ. ಏಕೆಂದರೆ

ಶೈತಾನ್ ಎಂಬ ನಾಮವು ಅವರಲ್ಲಿ ಕೆಲವರಿಗೆ ಅನ್ವಯವಾಗುತ್ತ-ದೆಯೆಂದು ವಿವರಿಸುವ ಅಧ್ಯಾಯ" ಎಂದಾಗಿದೆ.

ರಮದಾನ್ ತಿಂಗಳಲ್ಲಿ ಶೈತಾನರು ಬಂಧಿಸಲ್ಪಡುವಾಗ ಪ್ರಸ್ತುತ ತಿಂಗಳಲ್ಲಿ ಏಕೆ ಕೆಡುಕುಗಳು ಸಂಭವಿಸುತ್ತದೆಯೆಂದು ಕೆಲವರು ವಾದಿಸುವುದಿದೆ. ಈ ವಿಷಯದಲ್ಲಿ ಇಮಾಮ್ ಕುರ್ತುಬಿ ನೀಡಿದ ಉತ್ತರ ಪ್ರಸಕ್ತವಾಗಿದೆ. "ಕೆಡುಕಿನ ಪ್ರವರ್ತನೆಗಳು ಕಡಿಮೆಯಾಗು-ವುದು ಉಪವಾಸದ ಎಲ್ಲಾ ಶಿಷ್ಟಾಚಾರಗಳನ್ನು ಪಾಲಿಸಿ ಭಯಭಕ್ತಿ-ಯಿಂದ ಅದನ್ನು ನಿರ್ವಹಿಸುವವರಿಗಾಗಿದೆ ಎನ್ನುವುದು ಇದಕ್ಕಿರುವ ಉತ್ತರವಾಗಿದೆ. ಅಥವಾ ಸೈತಾನರಲ್ಲಿ ಕೆಲವರು ಸಂಕೋಲೆಯಲ್ಲಿ ಬಂಧಿಸಲ್ಪಡುತ್ತಾರೆ. ಕೆಲವು ವರದಿಗಳಲ್ಲಿ ಉಲ್ಲೇಖವಾದಂತೆ ಅವರಲ್ಲಿ ಅತ್ಯಂತ ಅಪಾಯಕಾರಿಗಳಲ್ಲದೆ (ಮಾರಿದ್) ಎಲ್ಲಾ ಶೈತಾನರುಗಳಲ್ಲ. ಇತರ ತಿಂಗಳುಗಳಿಗೆ ಹೋಲಿಸಿದರೆ ಇದರಲ್ಲಿ ಕೆಡುಕುಗಳು ಕಡಿಮೆಯಾಗುವುದು ಸಾಮಾನ್ಯವಾಗಿ ಕಂಡುಬರುವ ಕಾರ್ಯವಾಗಿದೆ. ಇನ್ನು ಎಲ್ಲಾ ಶೈತಾನರು ಸಂಕೋಲೆಗಳಲ್ಲಿ ಬಂಧಿಸಲ್ಪಟ್ಟರೂ ಆ ಕಾರಣದಿಂದ ಕೆಡುಕು ಮತ್ತು ಪಾಪಗಳು ಸಂಭವಿಸುವುದೇ ಇಲ್ಲವೆಂದು ವ್ಯಕ್ತವಾಗುವುದಿಲ್ಲ. ಏಕೆಂದರೆ ಶೈತಾನರು ಮಾತ್ರವಲ್ಲದೆ ಮನುಷ್ಯರ ದೇಹೇಚ್ಛೆ, ದುಶ್ಶೀಲ ನಡವಳಿಕೆ ಹಾಗೂ ಮನುಷ್ಯರಲ್ಲಿರುವ ಶೈತಾನರುಗಳೆಲ್ಲರೂ ಕೆಡುಕುಗಳಿಗೆ ಕಾರ್ಯಕರ್ತರಾಗುತ್ತಾರೆ." (ಫತ್‌ಹುಲ್ ಬಾರಿಯಿಂದ)

ಶೈಖುಲ್ ಇಸ್ಲಾಮ್ ಇಬ್ನ್ ತೈಮಿಯ್ಯ(ﷺ) ರವರ ಅಭಿಪ್ರಾಯ. "ಆದರೂ ಸಂಕೋಲೆಯಲ್ಲಿ ಬಂಧಿಸಲ್ಪಟ್ಟ ಶೈತಾನರಿಂದ ಕೇಡು ಸಂಭವಿಸಬಹುದು. ಆದರೆ ಅದು ರಮದಾನೇತರ ತಿಂಗಳು-ಗಳಲ್ಲಿ ಸಂಭವಿಸುವುದಕ್ಕಿಂತ ದುರ್ಬಲವಾಗಿರುತ್ತದೆ. ಇದು ಒಬ್ಬನ ಉಪವಾಸದ ಪೂರ್ಣತೆ ಹಾಗೂ ನ್ಯೂನತೆಗಳೊಂದಿಗೆ ತಳಕುಹಾಕಲ್ಪಟ್ಟಿದೆ. ಒಬ್ಬನ ಸಂಪೂರ್ಣವಾದ ಉಪವಾಸವು ಶೈತಾನರಿಂದ ಕೇಡುಗಳನ್ನು ತಡೆಯುವ ರೂಪದಲ್ಲಿ ಒಬ್ಬನ ನ್ಯೂನತೆಯಿಂದ ಕೂಡಿದ ಉಪವಾಸವು ತಡೆಯಲಾರದು." (ಮಜ್ಮಉಲ್ ಫತಾವ 25/246)

ಇತರ ತಿಂಗಳುಗಳಿಗೆ ಹೋಲಿಸಿದರೆ ರಮದಾನಿನಲ್ಲಿ ಶೈತಾನರ ದುರ್ಬೋಧನೆಗಳಲ್ಲಿರುವ ಕ್ರಿಯಾಶೀಲತೆ ಕಡಿಮೆಯಾಗುತ್ತದೆ. ಇದು ಸತ್ಯವಿಶ್ವಾಸಿಗಳಿಗೆ ಅಲ್ಲಾಹನಿಂದ ಲಭಿಸಿದ ಒಂದು ಮಹಾ ಅನುಗ್ರ-ಹವಾಗಿದೆ. ರಮದಾನಿನಲ್ಲಿ ಒಬ್ಬರ ಉಪವಾಸವು ಕುಂದುಕೊರತೆಗ-ಳಿಂದ ಮುಕ್ತವಾಗಲು ಈ ಅನುಗ್ರಹವು ಸಹಾಯ ಮಾಡುತ್ತದೆ. ■

---

*46 ನೇ ಪುಟದಿಂದ*

## ಕುರ್‌ಆನ್ ಸಾಧಿಸಿದ ಕ್ರಾಂತಿ

ನಿಷ್ಫಲವಾಗುವುದೆಂದು ನಾನು ಭಯಪಡುತ್ತೇನೆ." ಪ್ರವಾದಿ(ﷺ) ಯವರು ಕಳುಹಿಸಿಕೊಟ್ಟ ವ್ಯಕ್ತಿ ಈ ವಿಷಯವನ್ನು ಅವರ ಗಮನಕ್ಕೆ ತಂದಾಗ ಪ್ರವಾದಿ(ﷺ) ಯವರು "ಅವರು ಉತ್ತಮ ನೆಲೆಯಲ್ಲಿ ಜೀವಿಸುವ ಸಜ್ಜನರಲ್ಲಿ ಸೇರಿದ ವ್ಯಕ್ತಿಯಾಗಿದ್ದಾರೆ ಎಂಬ ಸುವಾರ್ತೆ-ಯನ್ನು ತಿಳಿಸಿರಿ" ಎಂದೆನ್ನುತ್ತಾ ಪುನಃ ಅವರ ಬಳಿಗೆ ದೂತನನ್ನು ಕಳುಹಿಸಿಕೊಟ್ಟರು.

ಅಲ್ಲಾಹನ ಆದೇಶ ಮತ್ತು ಪ್ರವಾದಿ(ﷺ) ಯವರ ನಿರ್ದೇಶನಗಳ ವಿರುದ್ಧ ಒಂದು ಕಿರು ಬೆರಳನ್ನೆತ್ತುವುದು ಕೂಡಾ ಬಹಳ ಗಂಭೀರ ಮತ್ತು ಅಪಾಯವನ್ನು ತಂದಿಡುವ ಕಾರ್ಯವಾಗಿದೆ. ಜೀವನದಲ್ಲಿ ಸಂಪಾದಿಸಿದ ಎಲ್ಲಾ ಸಂಪತ್ತು ಹಾಗೂ ಆಯುಷ್ಯವನ್ನು ಅದಕ್ಕೆ ಪರ್ಯಾಯವಾಗಿ ನೀಡಿದರೂ ಅದರ ಹೆಸರಲ್ಲಿರುವ ಶಿಕ್ಷೆಯಿಂದ ತಪ್ಪಿಸುವುದು ಪ್ರಮುಖವಾಗಿದೆಯೆಂದು ಅವರು ಬಲವಾಗಿ ದೃಢವಾಗಿ ನಂಬಿದ್ದರು.

ಪ್ರವಾದಿ(ﷺ) ಯವರು ಮತ್ತು ಸಹಾಬಿಗಳು ಕುರ್‌ಆನಿನೊಂ-ದಿಗಿಟ್ಟುಕೊಂಡಿದ್ದ ಸಂಬಂಧದ ಕಾಲಕ್ಕಿಂತ ಹೆಚ್ಚು ಕಾಲ ಸಂಬಂಧವನ್ನಿಟ್ಟುಕೊಳ್ಳುವ ಅವಕಾಶವು ಆಧುನಿಕ ಮುಸ್ಲಿಂ ಸಮುದಾಯಕ್ಕೆ ಲಭಿಸಿದೆ. ಆದರೂ ನಿರೀಕ್ಷಿತ ಪರಿವರ್ತನೆ ಉಂಟಾಗಿಲ್ಲ. ಇದಕ್ಕೆ ಕಾರಣವೇನು? ಸಹಾಬಿಗಳು ಕುರ್‌ಆನನ್ನು ಯಾವ ರೀತಿ ಅರ್ಥ ಮಾಡಿಕೊಂಡು ಅದರ ಆಶಯವನ್ನು ಗ್ರಹಿಸಿ ಜೀವನದಲ್ಲಿ ಅಳವಡಿಸಿಕೊಂಡಿದ್ದರೋ ಅದರಲ್ಲಿ ಆಧುನಿಕ ಸಮುದಾಯವು ವಿಫಲವಾಗಿದೆ. ಅಂತಹ ಬದಲಾವಣೆ ಸಂಭವಿ-ಸಬೇಕಾದರೆ ಪವಿತ್ರ ಕುರ್‌ಆನನ್ನು ನಾವು ಎದೆಗೆ ಅಪ್ಪಿಕೊಳ್ಳಬೇಕು.

﴿ لَوْ أَنزَلْنَا هَٰذَا ٱلْقُرْءَانَ عَلَىٰ جَبَلٍ لَّرَأَيْتَهُۥ خَٰشِعًا مُّتَصَدِّعًا مِّنْ خَشْيَةِ ٱللَّهِ ۚ وَتِلْكَ ٱلْأَمْثَٰلُ نَضْرِبُهَا لِلنَّاسِ لَعَلَّهُمْ يَتَفَكَّرُونَ ﴿٢١﴾ ﴾

"ನಾವು ಈ ಕುರ್‌ಆನನ್ನು ಒಂದು ಪರ್ವತದ ಮೇಲೆ ಇಳಿಸಿಬಿಡುತ್ತಿ-ದ್ದರೆ ಅದು ಅಲ್ಲಾಹನ ಭಯದಿಂದ ಮುದುಡಿ ನುಚ್ಚುನೂರಾಗುವು-ದನ್ನು ನೀವು ಕಾಣುತ್ತಿದ್ದಿರಿ. ಜನರು ಚಿಂತಿಸಬೇಕೆಂದು ನಾವು ಅವರ ಮುಂದೆ ಈ ಉಪಮೆಗಳನ್ನು ವಿವರಿಸುತ್ತೇವೆ." (59:28) ■

ಚಿ
ಣ್ಣ
ರ
ಅಂ
ಕ
ಣ

# ಅಮೃತಬಿಂದು

- ಜೀವನದಲ್ಲಿ ಮೂರು ವಿಷಯಗಳು ಅತಿಕಠಿಣ: ಮರಣಭಯ, ರೋಗದ ಉಲ್ಬಣ ಮತ್ತು ಸಾಲದ ಅಪಮಾನ.
- ಜೀರ್ಣವಾಗುವಷ್ಟು ಮಾತ್ರ ತಿನ್ನಿರಿ.
- ಹಸಿವಾಗದೆ ಉಣ್ಣಬೇಡಿ. ಹಸಿವು ಹೆಚ್ಚಿದ ಮೇಲೆ ಹಸಿದಿರಬೇಡಿರಿ.
- ಹುಳಿ ಆಹಾರ ಬೇಗನೇ ವೃದ್ಧಾಪ್ಯ ತರುತ್ತದೆ. ಶರೀರವನ್ನು ಕೃಶಕಾಯವಾಗಿಸುತ್ತದೆ.
- ಸಿಹಿ ಆಹಾರ ಶರೀರವನ್ನು ಬಿಸಿಯೇರಿಸುತ್ತದೆ. ಉಪ್ಪು ಶರೀರವನ್ನು ಒಣಗಿಸುತ್ತದೆ ಮತ್ತು ಕ್ಷೀಣಿಸುತ್ತದೆ.
- ಹೆಚ್ಚು ಆಹಾರ ಸೇವಿಸಿ ಸತ್ತವರಷ್ಟು ಸಂಖ್ಯೆಯಲ್ಲಿ ಖಡ್ಗ, ಫಿರಂಗಿ, ಕೋವಿಗಳಿಂದಲೂ ಸತ್ತಿಲ್ಲ.
- ಚರ್ಚೆಯು ಬುದ್ಧಿವಂತರಿಗೆ ಮೆರುಗು ಮತ್ತು ತಿಳಿಗೇಡಿಗಳಿಗೆ ದ್ವೇಷದ ಬೀಜ.
- ಬುದ್ಧಿ ಕಡಿಮೆಯಾಗುವುದು ಅತಿ ಮಾತಿನಿಂದ ಅಂದಾಜಿಸಲಾಗುತ್ತದೆ.
- ಅತಿದೊಡ್ಡ ರೋಗ ಮನೋರೋಗ. ಮನೋರೋಗಗಳಲ್ಲಿ ಅತಿದೊಡ್ಡದು ಮನ ನೋಯಿಸುವುದು.
- ಸುಸ್ಥಿತಿ—ದುಃಸ್ಥಿತಿ, ಇವೆರಡೂ ಕೇಡಿನ ಕಡೆಗೆ ಒಯ್ಯುತ್ತವೆ.
- ಜ್ಞಾನಾರ್ಜನೆಗಾಗಿ ಮೇಣದ ಬತ್ತಿಯಂತೆ ತನ್ನನ್ನು ಕರಗಿಸಿಕೊಳ್ಳಬೇಡ.
- ವಿದ್ಯೆಯು ಸಾಗರದಂತೆ. ಅದರಿಂದ ಎಷ್ಟು ಖರ್ಚು ಮಾಡಿದರೂ ಕಡಿಮೆಯಾಗುವುದಿಲ್ಲ.
- ಎಲ್ಲರಲ್ಲೂ ಒಂದಲ್ಲೊಂದು ಕೊರತೆ ಇದ್ದೇ ಇದೆ. ಬುದ್ಧಿವಂತನು ತನ್ನ ಕೊರತೆಯನ್ನು ಸ್ವಯಂ ತಿಳಿಯುತ್ತಾನೆ. ಜಗತ್ತು ತಿಳಿಯುವುದಿಲ್ಲ. ಮೂರ್ಖನು ತನ್ನ ಕೊರತೆಯನ್ನು ತಾನು ತಿಳಿಯುವುದಿಲ್ಲ. ಜಗತ್ತು ತಿಳಿಯುತ್ತದೆ.
- ಬುದ್ಧಿವಂತನು ಮಾತನಾಡುವುದಕ್ಕೆ ಮುನ್ನ ಯೋಚಿಸುತ್ತಾನೆ. ಆದರೆ ಮೂರ್ಖ ಮಾತನಾಡಿದ ನಂತರ ಯೋಚಿಸುತ್ತಾನೆ.